# ವಿಜಯನಗರದ ಗೈಡ



ಲೇಖಕರು :

ವಿ. ಪಿ. ಪತಿ

ಮಾರಾಟಗಾರರು:

ವಿಭೂತಿ ಬಸಯ್ಯನವರು

ಹಂಪಿ

೧೯೭೨

ಬೆಲೆ) Rs. 2-00

# ಅನುಕ್ರಮಣಿಕೆ







ಪ್ರಕಾಶಕರು :

ಎ. ಎಂ. ಕರಡಿ

ಬುಕ್ ಸೆಲರ್ ಮತ್ತು ಪಬ್ಲಿಶರ್, ಸ್ಟೇಶನರೋಡ, ಹುಬ್ಬಳ್ಳಿ.

ಮುದ್ರಕರು :

ಅಶೋಕ ಪ್ರಿಂಟಿಂಗ ಪ್ರೆಸ್, ಕಿಲ್ಲೆ, ಹುಬ್ಬಳ್ಳಿ.

# ಪ್ರಸ್ತಾವನೆ

ವೈಭವದಿಂದ ನಾಲ್ಕು ಶತಮಾನಗಳ ಕಾಲ ಮೆರೆದ ಅಂದಿನ ವಿಜಯನಗರ ಸಾಮ್ರಾಜ್ಯವೇ ಇಂದಿನ ಹಾಳು ಹಂಪಿಯು. ಈಗ ಹಂಪಿಯಲ್ಲಿ ನೋಡುವದೇನಿದೆ? ಎಂದು ಕೇಳಬಹುದು. ಅದೆಲ್ಲವೂ ಈಗ ಹಾಳು ಬಿದ್ದಿರುತ್ತದೆ. ಎಲ್ಲಿ ನೋಡಿದರೂ ನಾಶವಾದ ಮಂದಿರಗಳು, ಗುಡಿಗಳು ಭಗ್ನವಾದ ಮೂರ್ತಿಗಳು, ಹಾಳಾದ ರಸ್ತೆಗಳು ಮುಂತಾದವುಗಳನ್ನು ನಾವು ಕಾಣಬಹುದು. ಆದರೆ ಅವುಗಳ ಹಿಂದಿನ ವೈಭವದ ಪರಿಚಯ ನಮಗೆ ಅವಶ್ಯ. ಅವುಗಳ ಹಿಂದಿನ ನೋಟ ಮನೋಹರವಾದದ್ದು. ಆ ವೈಭವದ ಸ್ಥಿತಿಯನ್ನು ನೋಡಿದರೆ ಅವುಗಳ ಈಗಿನ ಸ್ಥಿತಿಯನ್ನು ನೋಡಿದರೆ ಎಂತಹ ಕಲ್ಲುಹೃದಯವೂ ಸಹ ಕರಗಬಹುದು. ಆದ್ದರಿಂದ ಅವುಗಳ ಹಿಂದಿನ ವಸ್ತುಸ್ಥಿತಿಯ ಪರಿಚಯವನ್ನು ಮಾಡಲು ಈ ಚಿಕ್ಕ ಪ್ರಯತ್ನ ಮಾಡಿದ್ದೇವೆ.

ಈ ಚಿಕ್ಕ ಪುಸ್ತಕದಲ್ಲಿ ಸಂಕ್ಷೇಪವಾಗಿ ಪಂಪಾನಗರದ ಐತಿಹಾಸಿಕ, ಪೌರಾಣಿಕ ಮಹತ್ವವನ್ನು ಹೇಳಿ ಅಲ್ಲಿ ಆಳಿದ ರಾಜರ ಪರಿಚಯವನ್ನು ಮಾಡಲಾಗಿರುತ್ತದೆ. ಮುಂದೆ ಪ್ರವಾಸಿಗರು ನೋಡಬೇಕಾದ ಸ್ಥಳಗಳ ಪರಿಚಯವನ್ನು ಸ್ಥೂಲವಾಗಿ ಮಾಡಲಾಗಿರುತ್ತದೆ. ಮುಂದೆ ಪ್ರಮುಖ ಅರಸರ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಹೇಗೆ ಇದ್ದಿತೆಂಬುದನ್ನು ವಿವರಿಸಲಾಗಿದೆ ವಿಜಯನಗರ ಸಾಮ್ರಾಜ್ಯವನ್ನು ಆಳಿದವರು ನಾಲ್ಕು ವಂಶದವರು. ಸಂಗಮ ವಂಶದವರು ಸಂಸ್ಥಾಪಕರು. ತರುವಾಯ ಸಾಳ್ವ, ತುಳುವ ಮತ್ತು ಅರವೀಡು ವಂಶಗಳು. ೧೩೩೬ರಿಂದ ೧೬೬೪ರವರೆಗೆ ಈ ಸಾಮ್ರಾಜ್ಯದ ಆಳಿಕೆಯು. ಸು. ಮೂರುನೂರು ವರ್ಷಗಳ ವರೆಗೆ ವೈಭವದಿಂರ ಆಳಿದ ಈ ಸಾಮ್ರಾಜ್ಯದ ಇತಿಹಾಸವು ನಮ್ಮೆಲ್ಲರಿಗೆ ಮಾರ್ಗದರ್ಶಕವಾಗಲಿ.

ಈಗ ಸರಕಾರದವರು ಅಲ್ಲಿ ಉಕ್ಕಿನ ಕಾರಖಾನೆಯ ಸ್ಥಾಪನೆಯ ಕಾರದಲ್ಲಿ ತೊಡಗಿದ್ದಾರೆ. ಅಲ್ಲಿ ಒಂದು ವಿಮಾನ ನಿಲ್ದಾಣವನ್ನು ಕಟ್ಟುವ ಯೋಜನೆಯು ಇರುತ್ತದೆ. ಆದರ ಜೊತೆಗೆ ನಾಶಹೊಂದಿದ ದೇವಾಲಯಗಳ ಮೂರ್ತಿಗಳ ಜೀರ್ಣೋದ್ಧಾರದ ಕಾರ್ಯಕೈಕೊಂಡರೆ ಶ್ರೇಯಸ್ಕರ.

ಪ್ರವಾಸಿಗರಿಗೆ ಅನುಕೂಲವಾಗುವ ರೀತಿಯಲ್ಲಿ ವಿಷಯ ಸಂಗ್ರಹಣೆ ಇರುತ್ತದೆ. ಓದುಗರು, ಪ್ರಯಾಣಿಕರು ಇದರ ಲಾಭವನ್ನು ತೆಗೆದುಕೊಂಡರೆ ನಮ್ಮ ಶ್ರಮ ಸಾರ್ಥಕವಾದಂತೆ.



— ಲೇಖಕ

ಶ್ರೀ

# ಶ್ರೀ ಭುವನೇಶ್ವರೀ ಸ್ತೋತ್ರ

ಕರ್ನಾಟಕದ ಜಯ ವಿಜಯ ಮಾತೇ ಶ್ರೀ ಕನ್ನಡದ ರಾಜರಾಜೇಶ್ವರಿ ||
ಚಿನ್ಮಯ ಸ್ಫುರದ್ರೂಪಿಣಿ, ಅಖಿಲಾಂಡಕೋಟಿ ಶಕ್ತಿಸ್ವರೂಪಿಣಿ
ಜಗದಾದಿ ಶಕ್ತಿ ಶ್ರೀ ಭುವನೇಶ್ವರಿ ||
ಮಾತಂಗಂ ಮಾಲ್ಯವಂತಂ, ಹೇಮಕೂಟಂ, ಹನುಮತ್ಪರ್ವತಂ
ಋಷ್ಯ ಮುಖಂ ರಜತಾದ್ರಿ, ರತ್ನ ಕಿರೀಟೇ ಶ್ರೀ ರಾಜೇಶ್ವರಿ ||
ವಿಜಯ ವಿದ್ಯಾರಣ್ಯ ಪುಸ್ತಕಸೋಡಿರಿ ವಿದ್ಯಾನಗರದ ಸಾಮ್ರಾಜ್ಯದ
ವಿದ್ಯಾದಿ ದೇವತೇ–ಕನ್ನಡದ ರಾಜರಾಜೇಶ್ರೀ
ವೀರಾಧಿವೀರ ನೃಪತುಂಗ ಕನ್ನಡ ಕುಲೋತ್ತಮ ವೀರಹರಿಹರನ ಖಡ್ಗಶ್ರೀ
ಭುವನೇಶ್ವರಿ ||
ಪಂಪ ರನ್ನಾದಿ ಚಾಮರಸ ಹರಿಹರೇಶ ರಾಘವಾಂಕ ಗದಿಗಿನ ವೀರ
ನಾರಾಯಣಪ್ಪ ವರಕವಿಗಳ ಅಮರವಾಣಿ ಶ್ರೀ ಭುವನೇಶ್ವರಿ ||
ದಂಡುರಕ್ಕಸರ ಮಾರ್ಬಲವಂ ಲೆಕ್ಕಿಸದೆ ಕುಕ್ಕಿ ಬಂಡೆಬ್ಬಿಸಿದ ರುದ್ರಾಣಿ
ಶ್ರೀ ಜಗನ್ಮಾತೇ ಶ್ರೀ ಭುವನೇಶ್ವರಿ ||
ಶ್ರೀ ಪಂಪಾ ವಿರುಪಾಕ್ಷನ ರಕ್ಷಾಕವಚವಂ ಮಾಧವನಿಗೆ ತೊಡಸಿ
ಬಡಿದೆಬ್ಬಿಸಿದ ಕನ್ನಡದ ಕನ್ನಡಾಂಬೆ ||
ಚಂಡಿ ಚಾಮುಂಡೇ ಜಗತೇ ಸೃಷ್ಟಿಸ್ಥಿತಿ ಲಯಕರ್ತೆ ||
ಜಗದಾದಿ ಶಕ್ತಿಸ್ವರೂಪಿಣಿ ಕರ್ನಾಟಕದ ವಿಜಯಮಾತೆ ಶ್ರೀ ಭುವನೇಶ್ವರಿ||
ಧೀಮಂತ ಪ್ರವಡೇಶ್ವರಿ, ಮಹೇಶ್ವರಿ, ತ್ರಿಪುರೇಶ್ವರಿ, ಶಾಂಭವಿ
ಶ್ರೀ ಭುವನೇಶ್ವರಿ ||
ಆಧಿಗರ್ಭಯ, ಅನಾಧಿಗರ್ಭಯ, ನವರಾತ್ರಿಗರ್ಭಯ.,,
ಬ್ರಾಹ್ಮಗರ್ಭಯ ಶಿವೇಶ್ವರಿ ಶ್ರೀ ಭುವನೇಶ್ವರಿ ||
ಅಂಬಾ ಅಂಜೀ ಮಹೇಶ್ವರಿ ಜಗದಂಬೇ ಭಂಗಾಳಾಂಭ ||
ಋಕ್ಷಣಿ ತೀಕ್ಷ್ಣಣಿಪಂಪಾ ಈಶ್ವರಿ ||

ಅಹಿಂಸಾ ಅಘೋರ ಮಾಧವನ ಸತ್ವಶ್ರೀ ಶ್ರೀ ಭುವನೇಶ್ವರಿ ||
ಕನ್ನಡ ನಾಡಿನ ಜನಮನದ ವಿಜೇಶ್ವರಿ ವೈಷ್ಣವಿ ನಾರಾಯಣಿ ||
ಆದಿಲಕ್ಷ್ಮಿ ಮಂಗಳಂ ಚಂಡಿಕಾ ಮಂಗಳಂ ಶಾರದೆ ಮಂಗಳಂ
ಗಂಗಾಮಾತೇ ಮಂಗಳಂ ನಾರಾಯಣಿ ಮಂಗಳಂ ಶಾಂಭವಿ ಮಂಗಳಂ||
ಶ್ರೀ ಭುವನೇಶ್ವರಿ ಸರ್ವ ಮಂಗಳಂ||
ಪಾಹಿಮಾಮ್ ಪಾಹಿಮಾಮ್||
ನಮೋ ನಮೋಸ್ತುತೇ ಶ್ರೀ ಭುವನೇಶ್ವರಿ ಚರಕಾಂಬುಜ ಸೇವಕ
ಸ್ತುತಿಸುವೆ ಓಂ ಶಾಂತಾಯ ಓಂ ಓಂ ಓಂ ಶಾಂತಾಯ ||

"ಲೇಖಕ" ವಿ. ಪಿ. ಪತಿ
ಹಂಪೀ






ಹಂಪಿಯ ವಿರೂಪಾಕ್ಷ ದೇವರು



ವಿಜಯವಿಠ್ಠಲನ ಗುಡಿ



ಕಾವಲು ಗೋಪುರ



ರಾಮದೇವರ ಗುಡಿ

# ವಿಜಯನಗರ ಸಾಮ್ರಾಜ್ಯ ಸ್ಥಾಪನೆ

## ೧. ಐತಿಹಾಸಿಕ ದೃಷ್ಟಿಕೋನ

### ಪೂರ್ವೇತಿಹಾಸ

೧೨೯೪ರಲ್ಲಿ ದಕ್ಷಿಣ ಹಿಂದುಸ್ತಾನದ ರಾಜಕೀಯ ವಾತಾವರಣವು ಪ್ರಶಾಂತಮಯವಾಗಿದ್ದಿತು. ದೇವಗಿರಿಯಲ್ಲಿ ಯಾದವ ವಂಶದ ರಾಜಾ ರಾಮಚಂದ್ರನೂ, ಒರಂಗಲ್ಲಿನಲ್ಲಿ ಕಾಕತೀಯ ವಂಶದ ಪ್ರತಾಪರುದ್ರನೂ ದ್ವಾರಸಮುದ್ರದಲ್ಲಿ ಹೊಯ್ಸಳ ಸಾಮ್ರಾಟನಾದ ಮುಮ್ಮಡಿ ಬಲ್ಲಾಳನೂ, ಮಧುರೆಯಲ್ಲಿ ಪಾಂಡ್ಯ ಅರಸನೂ, ಕಂಪಲಿಯಲ್ಲಿ ಕಾಂಪಿಯೂ ಪರರ ಆಕ್ರಮಣದ ಭೀತಿಯಿಲ್ಲದೇ ಸುಖವಾಗಿ ರಾಜ್ಯವಾಳುತ್ತಿದ್ದರು. ಅದೇ ವರ್ಷದಲ್ಲಿ ಅಲ್ಲಾವುದ್ದೀನ ಖಿಲಜಿಯು ದಿಲ್ಲಿಯ ಒಳಸಂಚಿನಿಂದ ಅಲಿಪ ನಾಗಿರಬೇಕೆಂದು ಬಯಸಿ ದಕ್ಷಿಣದ ಕಡೆಗೆ ಹೊರಳಿದನು. ಆದರಂತೆ ದೇವಗಿರಿಯಲ್ಲಿರುವ ಅತುಲವಾದ ಸಂಪತ್ತನ್ನು ದೋಚಿಕೊಳ್ಳಬೇಕೆಂದ್ದೆ ಬಯಸಿ ಆವನು ೧೨೯೪ ರಲ್ಲಿ ಎಲಿಚ್‌ಪುರವನ್ನು ಸ್ವಾಧೀನ ಪಡಿಸಿಕೊಂಡು ದೇವಗಿರಿಯ ರಾಜಾ ರಾಮಚಂದ್ರನನ್ನು ಸೋಲಿಸಿ ಅಪಾರವಾದ ಸಂಪತ್ತನ್ನು ದೋಚಿಕೊಂಡನು. ದೇವಗಿರಿಯ ರಕ್ಷಣಕ್ಕೆ ದುರ್ದೈವದಿಂದ ಯಾರೂ ಸಹಾಯಕ್ಕೆ ಬರಲಿಲ್ಲ. ಈ ರೀತಿಯ ಅನುಕೂಲ ಪರಿಸ್ಥಿತಿಯನ್ನು ನೋಡಿ ಭಯಗ್ರಸ್ಥರಾದ ಹಿಂದೂ ಸೈನಿಕರ ಅವಸ್ಥೆಯನ್ನು ನೋಡಿ, ಇನ್ನುಳಿದ ದಕ್ಷಿಣ ರಾಜ್ಯಗಳ ಕಡೆಗೆ ಧಾವಿಸಲು ಅಲ್ಲಾವುದ್ದೀನನಿಗೆ ಇಮ್ಮಡಿ ಉತ್ಸಾಹ ಬಂದಿತೆಂದು ಹೇಳಿದರೆ ತಪ್ಪಾಗಲಾರದು. ಅದೇ ಪ್ರಕಾರ ಆತನು ಒರಂಗಲ್ಲ

ದ್ವಾರಸಮುದ್ರ, ಮಧುರೆ, ಕಂಪಲಿ ಮುಂತಾದವುಗಳನ್ನು ವಶಪಡಿಸಿ ಕೊಂಡನು. ಹೀಗೆ ದಕ್ಷಿಣದ ಸಂಪದ್ಭರಿತ ರಾಜ್ಯಗಳೆಲ್ಲವೂ ಮಹಮ್ಮದಿಯರ ವಶವಾದವು. ಖಿಲಜಿ ಮತ್ತು ತಘಲಕ ವಂಶದವರಾದ ಮಹಮ್ಮದೀಯರು ಅಪಾರ ದುರ್ಬುದ್ಧಿಯುಳ್ಳವರು. ಹಿಂದೂ ರಾಜ್ಯಗಳ ವಿಧ್ವಂಸ, ಸುಲಿಗೆ, ನಿರಪರಾಧಿ ಹಿಂದೂ ಪುರುಷರ ಅಮಾನುಷ ಕೊಲೆ, ಗುಹಿ-ಗುಂಡಾರಗಳ ಸುಲಿಗೆ, ರಾಜರುಗಳ ಕೊಲೆ, ಸೆರೆಮನೆವಾಸ ಇವೇ ಮುಂತಾದ ಅಮಾನುಷ ಕೃತಿಗಳಲ್ಲಿ ತೊಡಗಿದ್ದರು. ಈ ದುಷ್ಕೃತ್ಯಗಳು ಇಸ್ಸೀದ ಹಿಂದೂ ಜನರ ಸ್ವಾಭಿಮಾನವನ್ನು ಕೆಣಕಿತು. ಅವರು ಕಣ್ದೆರೆದು ಈ ಅಸಹ್ಯ ಅಮಾನವಿಯ, ರಾಕ್ಷಸೀ ಪಾಶವೀ, ವೃತ್ತಿಯಿಂದ ಬಿಡುಗಡೆಯಾಗಲು ನಿರ್ಧರಿಸಿದರು. ಈ ರೀತಿ ನಿರ್ಧರಿಸಿದವರೆಂದರೆ ಆನೆಗುಂದಿಯ ಅರಸು ಮಕ್ಕಳೀರ್ವರು ಎಂದರೆ ಆಶ್ಚರ್ಯವಾದೀತು. ಅದು ಹೀಗೆ! ಮಹಮ್ಮದ ತಘಲಕ ಬಿಜಾಪುರದವರ ಸಹಾಯ ಪಡೆದು ಆನೆಗುಂದಿಯ ಮೇಲೆ ೧೩೩೪ರಲ್ಲಿ ದಂಡೆತ್ತಿ ಬಂದನು. ಆಗ ಆನೆಗುಂದಿಯು ಯುದ್ಧದಲ್ಲಿ ಮಹಮ್ಮದನ ವಶವಾಯಿತು. ಆದರೆ ಸುದೈವದಿಂದ ಹಿಂದೂ ಅಭಿಮಾನಿಗಳಾದ ಆನೆಗುಂದಿಯ ಅರಸು ಮಕ್ಕಳಿಬ್ಬರು ಹೇಗೋ ತಪ್ಪಿಸಿಕೊಂಡು, ತುಂಗಭದ್ರಾ ನದಿಯ ದಂಡೆಯಲ್ಲಿರುವ ಪಂಪಾಪತಿಯ ವಿಶಾಲ ಅರಣ್ಯದಲ್ಲಿ ತಪಸ್ವಿಗಳಾಗಿ ಸದಾ ಹಿಂದೂ ಧರ್ಮದ ಶ್ರೇಯಸ್ಸಿಗಾಗಿ ಧ್ಯಾನಿಸುತ್ತಿರುವ "ವಿಜಯ ವಿದ್ಯಾರಣ್ಯರ" ಸನ್ನಿಧಾನದಲ್ಲಿ ಮೊರೆಹೊಕ್ಕು ಅವರ ಆಶ್ರಮದಲ್ಲಿ ಆಶ್ರಯ ಪಡೆದರು. ಈ ಇಬ್ಬರು ಅರಸು ಕುವರರೇ ಹುಕ್ಕ-ಬುಕ್ಕರು. ಈ ರಾಜ ಕುಮಾರರನ್ನು ನೋಡಿ ಅವರ ಮೊಗದಲ್ಲಿದ್ದ ರಾಜಕಳೆಯನ್ನು ನೋಡಿ ತಮ್ಮ ಮನದಿಚ್ಛೆ ಇಂದು ಪೂರೈಸಿತೆಂದು ಬಗೆದು ಅವರನ್ನು ಆಶೀರ್ವದಿಸಿ ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿದರು. ತಮ್ಮ ತಪಸ್ಸನ್ನೆಲ್ಲ ಹಿಂದೂ ರಾಜ್ಯ ಸ್ಥಾಪನೆಗೆ ಧಾರೆ ಎರೆಯುವದಾಗಿ ತಿಳಿಸಿ ಪಂಪಾಪತಿಯ ಕೃಪೆಯಿಂದ ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸುವದಾಗಿ ಅಂದೇ ನಿರ್ಧರಿಸಿದರು. ಅಲ್ಲದೇ ಹಕ್ಕ ರಾಜನಿಗೆ ಒಂದನೇ ಹರಿಹರರಾಯನೆಂದು ಅಭಿದಾನ ಮಾಡಿ ಅವನಿಗೆ ಆಶೀರ್ವದಿಸಿ ಪಂಪಾಪತಿಯ ನೇತೃತ್ವದಲ್ಲಿ ರಾಜ್ಯಾಭಿಷೇಕ ಮಾಡಿದರು. ತಾವು ರಾಜ

ಗುರುಗಳಾದರು. ರಾಜಗುರು ವಿದ್ಯಾರಣ್ಯರ ಆಶೀರ್ವಾದದಿಂದ ಪಂಪಾಪತಿಯ ಕೃಪೆಯಿಂದ ಹರಿಹರರಾಯನನ್ನು ತನ್ನ ಸಹೋದರ ಬುಕ್ಕರಾಯನೊಂದಿಗೆ ಹಿಂದೂ ಸೈನಿಕರನ್ನು ಅಣಿಮಾಡುವದರಲ್ಲಿ ತೊಡಗಿದನು.

ಸಾಮ್ರಾಜ್ಯ ಸ್ಥಾಪನೆ:—ವಿದ್ಯಾರಣ್ಯರ ಮನದಿಚ್ಛೆಯ ಪ್ರಕಾರ ಸಹೋದರರೀರ್ವರು, ಕಂಪಲಿ, ಗುತ್ತಿದುರ್ಗ, ಚಿತ್ರದುರ್ಗ, ಮೇವುಂಡಿ, ಮಳಖೇಡ, ಕೊಪ್ಪಳ ಮುಂತಾದ ಹಿಂದೂ ನಾಯಕರನ್ನೆಲ್ಲ ಒಟ್ಟುಗೂಡಿಸಿ ಅವರನ್ನೆಲ್ಲ ಪಂಪಾಪತಿಯ ಆಶೀರ್ವಾದ ಬಲದಿಂದ ೧೩೩೬ರಲ್ಲಿ"ವಿಜಯನಗರ ಸಾಮ್ರಾಜ್ಯವನ್ನು" ಸ್ಥಾಪಿಸಿದರು. ಶ್ರೀ ವಿದ್ಯಾರಣ್ಯರು ಈ ಕರ್ನಾಟಕ ಸಾಮ್ರಾಜ್ಯದ ಮೊದಲನೆಯ ರಾಜಗುರು.

ಲಾಂಛನ:-ಚಾಲುಕ್ಯರ ಲಾಂಛನವಾದ ವರಾಹವನ್ನೇ ವಿಜಯನಗರದ ರಾಯರು ತಮ್ಮ ಲಾಂಛನವನ್ನಾಗಿ ಅಂಗೀಕರಿಸಿದರು. ಶ್ರೀ ವಿರೂಪಾಕ್ಷನು ಇವರ ಕುಲದೇವರು. ವಿಜಯನಗರವೇ ಇವರ ಮೂಲ ರಾಜಧಾನಿ. (ಮುಂದೆ ೧೫೬೫ರ ನಂತರ ಪೆನುಗೊಂಡೆ, ಚಂದ್ರಗಿರಿ, ವೆಲ್ಲೂರುಗಳಿಗೆ ಸ್ಥಳಾಂತರ ಹೊಂದಿತು.)

ಮನೆತನಗಳು:—ಈ ರಾಜ್ಯದಲ್ಲಿ ನಾಲ್ಕು ಮನೆತನದ ರಾಜರು ಆಳಿದರು. ಯಾದವ ವಂಶದ ಸಂಗಮ ಮನೆತನ ಮೊದಲನೆಯದು. ಇವರು ೧೩೩೬ ರಿಂದ ೧೪೮೬ರ ವರೆಗೆ ರಾಜ್ಯವಾಳಿದರು. ಇವರಲ್ಲಿ ೯ ಜನ ರಾಜರಿದ್ದರು. ಆ ನಂತರ ಸಾಳ್ವ ಮನೆತನದವರು. ೧೪೮೬ರಿಂದ ೧೫೦೪ ರ ವರೆಗೆ ಆಳಿದರು. ಇಬ್ಬರೇ ರಾಜರು ಆಳಿದರು. ಮೂರನೆಯವರು ತುಳುವ ಅಥವಾ ನರಸ ವಂಶದವರು. ಈ ಮನೆತನದಲ್ಲಿ ಆರು ಜನ ರಾಜರು. ೧೫೦೪ ರಿಂದ ೧೫೭೦ರವರೆಗೆ ಆಳಿದರು. ಕೊನೆಯದಾದ ಅರವೀಡು ಅಥವಾ ಕರ್ನಾಟಕ ಮನೆತನದ ಆರು ಜನ ರಾಜರು ೧೫೭೦ ರಿಂದ ೧೬೪೪ ರವರಗೆ ಆಳಿದರು.

ಸಂಗಮ ಮನೆತನ:—ಈ ಮನೆತನದಲ್ಲಿ ಹರಿಹರನು ಮೊದಲನೆಯ ರಾಜನು. ಎರಡನೆಯವನು ಬುಕ್ಕರಾಯನು. ಇವರಿಬ್ಬರು ವಿಜಯನಗರ ಸಾಮ್ರಾಜ್ಯವನ್ನು ವಿಸ್ತರಿಸಲು ಪ್ರಯತ್ನಿಸಿದರು. ದಕ್ಷಿಣದಲ್ಲಿದ್ದ ಚೋಳ ರಾಜರನ್ನು ಕಾಳುವರು- ಪಾಂಡ್ಯರನ್ನು ಸದೆಬಡೆದು ಮಾಂಡಲೀಕರನ್ನಾಗಿ

ಮಾಡಿಕೊಂಡು ಕನ್ಯಾಕುಮಾರಿಯವರೆಗೆ ಈ ಸಾಮ್ರಾಜ್ಯವನ್ನು ವಿಸ್ತರಿಸಿದರು. ನಂತರ ಪಶ್ಚಿಮದ ಕಡೆಗೆ ಸಾಗಿ ಕಾರವಾರ, ಭಟಕಳ, ಗೋವೆ ಮಂಗಳೂರು ಮುಂತಾದವುಗಳನ್ನು ಹಿಂದೂ ಸಾಮ್ರಾಜ್ಯಕ್ಕೆ ಸೇರಿಕೊಂಡರು. ಮುಂದೆ ಆಡಳಿತದ ದೃಷ್ಟಿಯಿಂದ ಸರಿಯಾದ ಬಿಗುವಿನ ಆಡಳಿತವನ್ನು ನಡೆಸಿಕೊಂಡು ಬಂದರು. ವಿದ್ಯಾರಣ್ಯರ ತಪಸ್ಪ್ರಭಾವದಿಂದ ಪಂಪಾಪತಿಯು ಹೊನ್ನಿನ ಮಳೆಗರೆದನೆಂದು ಪ್ರತೀತಿ ಇರುತ್ತದೆ. ಅಂತೆಯೇ "ಬಂಗಾರದ ಹೊಗೆ" ವಿಜಯನಗರ ಸಾಮ್ರಾಜ್ಯದ ತುಂಬ ವ್ಯಾಪಿಸಿತ್ತು. ಒಂದನೆಯ ಹರಿಹರನು ವಿರೂಪಾಕ್ಷ ದೇವಾಲಯವನ್ನು ವಿಶಾಲವಾಗಿ ಕಟ್ಟಿಸಿದನು. ೧೩೪೦ ರಲ್ಲಿ ಒಂದನೆಯ ಹರಿಹರನು ಕಾಲವಾದ ನಂತರ ಬುಕ್ಕರಾಯನು ಪಟ್ಟವೇರಿದನು. ಈತನೂ ರಕ್ತರಹಿತವಾಗಿ ಸಾಮ್ರಾಜ್ಯ ವಿಸ್ತಾರವನ್ನು ಮಾಡಿದನು. ಇದು ಈತನ ವೈಶಿಷ್ಟ್ಯ. ಮುಸಲ್ಮಾನರ ದಬ್ಬಾಳಿಕೆಗೆ ಬೇಸತ್ತ ದಕ್ಷಿಣದ ಎಲ್ಲ ರಾಜರು ಬುಕ್ಕರಾಯನಿಗೆ ಮಾಂಡಲೀಕರಾಗಿ ತಾವು ಒಗ್ಗೂಡಿ ಮುಸಲ್ಮಾನರನ್ನು ಹೊಡೆದೊಡಿಸಲು ತಯಾರಾದರು. ಹೀಗಾಗಿ ದಕ್ಷಿಣ ದೇಶವೆಲ್ಲ ವಿಜಯನಗರಕ್ಕೆ ಸೇರಿತು. ಉತ್ತರದಲ್ಲಿಯೂ ಸಹ ಈ ಪರಿಸ್ಥಿತಿ ಉಂಟಾದ್ದರಿಂದ ಅಲ್ಲಿಯ ರಾಜನು ವಿಜಯನಗರದ ರಾಜನಿಗೆ ಬೆಂಬಲವನ್ನು ಸೂಚಿಸಿದ್ದರಿಂದ ಬುಕ್ಕರಾಯನು ಈ ವೇಳೆಯ ಸದುಪಯೋಗ ಮಾಡಿಕೊಂಡು ರಕ್ತರಹಿತವಾಗಿ ಸಾಮ್ರಾಜ್ಯವಿಸ್ತೀರ್ಣ ಮಾಡಿದನು. ಸಂಗಮ ವಂಶದಲ್ಲಿ ಹದಿನಾಲ್ಕು ಅರಸರು ಆಳಿಹೋದರು. ಅವರಲ್ಲಿ ಒಂದನೆಯ ದೇವರಾಯನ ಕಾಲದಿಂದ ಅಭ್ಯುದಯಕ್ಕಾರಂಭವಾಯಿತೆಂದು ಸಹ ತೋರುತ್ತದೆ. ಎರಡನೆಯ ದೇವರಾಯನ ಆಳಿಕೆಯಲ್ಲಿ ಶ್ರೀಮಂತಿಕೆಯು ವೈಭವ ಮೂಡಿತು. ಎರಡನೆಯ ದೇವರಾಯನ ತರುವಾಯ ಬಂದ ರಾಜರು ಅಷ್ಟೊಂದು ಶಕ್ತಿಯುತವಾಗಿರಲಿಲ್ಲ. ಇದ್ದ ರಾಜ್ಯವನ್ನು ಕಾಯ್ದುಕೊಂಡು ಹೋಗುವಷ್ಟು ಸಮರ್ಥರಾಗಿದ್ದರು. ರಾಜಶೇಖರರಾಯನಿಗೂ ಮುಸಲ್ಮಾನರ ದಾಳಿಯನ್ನು ತಡೆಯುವಷ್ಟರಲ್ಲಿ ಸಾಕುಬೇಕಾಯಿತು.

ಸಾಳ್ವವಂಶದವರು:— [೧೪೮೬ ರಿಂದ ೧೫೦೮] ವಿಜಯನಗರದಲ್ಲಿಯ ಪ್ರಸಿದ್ಧ ಸರದಾರನಾದ ಸಾಳ್ವ ನರಸಿಂಹನು ಬಹಳ ಶೂರನಿದ್ದನು. ಸಮಯ

ಸಾಧಿಸಿ ಈತನು ಸಂಗಮ ಮನೆತನದ ವಿರೂಪಾಕ್ಷನನ್ನು ಪಟ್ಟದಿಂದ ತಳ್ಳಿ ತಾನೇ ರಾಜ್ಯಸೂತ್ರವನ್ನು ವಹಿಸಿಕೊಂಡನು. ಈತನ ಕಾಲದಲ್ಲಿ ಬಹುಮನಿ ಸುಲ್ತಾನನೊಡನೆ ಹೋರಾಡುವ ಪ್ರಸಂಗಗಳು ಬಂದವು. ಈತನ ನಂತರ ಇಮ್ಮಡಿ ನರಸಿಂಹನು ಬಂದನು. ಈತನು ಶಿಲ್ಪಕಲೆಗೆ ಬಹಳ ಉತ್ತೇಜನ ವನ್ನು ಗೊಟ್ಟನು. ಈತನು ಉಗ್ರನರಸಿಂಹ, ಕಡಲೆಕಾಳ ಗಣಪತಿ, ಕಲ್ಲಿನ ತೇರು ಮೊದಲಾದ ಶಿಲ್ಪಕಲೆಗಳಿಗೆ ಉತ್ತೇಜನವೀಯುತ್ತಾನೆ. ಈ ಅರಸ ರಿಂದಲೇ ವಿಜಯನಗರ ಸಾಮ್ರಾಜ್ಯದಲ್ಲಿ ಶಿಲ್ಪಕಲೆ, ಸಂಗೀತ, ಹಸ್ತಿದಂತ, ಮುಂತಾದ ಕಾರ್ಯಗಳು ಅಭಿವೃದ್ಧಿ ಹೊಂದಿದವು. ಮುಸಲ್ಮಾನರ ಪುಂಡಾ ಟವು ನಿಂತಿತು. ಇವರಷ್ಟು ಭಲಾಢ್ಯ ಅರಸರು ಆಗಿನ ಕಾಲದಲ್ಲಿದ್ದಿಲ್ಲ.

ತುಳುವ ಮನೆತನ:—[೧೫೦೮ ರಿಂದ ೧೫೭೦] ಇಮ್ಮಡಿ ನರಸಿಂಹನ ಪ್ರಸಿದ್ಧ ದಂಡನಾಯಕನಾದ ನರಸನಾಯಕನು ಸಮಯ ದೊರೆಯಲು ರಾಜ್ಯ ಸೂತ್ರಗಳನ್ನು ವಹಿಸಿಕೊಂಡನು. ಇವನು ಚೇರ, ಚೋಳ, ಪಾಂಡ್ಯ. ಅರಸ ರನ್ನು ಮಧುರೆಯ ರಾಜರನ್ನೂ ಮುಸಲ್ಮಾನರನ್ನೂ, ಗಜಪತಿ ರಾಜನನ್ನು ಗೆದ್ದು ಗಂಗಾನದಿಯಿಂದ ಲಂಕೆಯವರೆಗೂ, ಪೂರ್ವಬೆಟ್ಟದಿಂದ ಪಶ್ಚಿಮ ಬೆಟ್ಟದವರೆಗೂ ರಾಜ್ಯವನ್ನು ವಿಸ್ತರಿಸಿದ್ದನೆಂದು ಶಿಲಾಲೇಖನಗಳು ಹೇಳುತ್ತವೆ. ಈತನ ಮಗನಾದ ಕೃಷ್ಣದೇವರಾಯನೇ ಅತಿಯಾದ ಘನತೆವೆತ್ತ ಸಾಮ್ರಾಟನು. ವಿಜಯನಗರದ ಅಭ್ಯುದಯಕ್ಕೆ ಕಾರಣೀಭೂತನಾದ ಸಾಮ್ರಾಟನು ಈತನೇ. ಈತನಿಗೆ 'ಕರ್ನಾಟಕ ರಾಜ್ಯರಮಾರಮಣ' ನೆಂಬ ಬಿರುದು ಉಂಟು. ಈತನು ರಾಜ್ಯವನ್ನು ಬಹುವಾಗಿ ವಿಸ್ತರಿಸಿದನು. ನೆರೆಯ ಓಡಿಸಾ ಪ್ರಾಂತವನ್ನೂ ಗೆದ್ದು ಅಲ್ಲಿಯ ರಾಜಕುಮಾರಿಯನ್ನು ಮದುವೆ ಯಾದನು. ಈತನು ಸಂಪಾದಿಸಿದ ರಾಯಪೂರ ಕೋಟೆಯ ದಿಗ್ವಿಜಯವು ಇತಿಹಾಸ ಪ್ರಸಿದ್ಧವಿರುತ್ತದೆ. ಈತನ ಕಾಲದಲ್ಲಿ ಇರಾಣ, ಪೋರ್ತುಗಾಲ, ಮುಂತಾದ ದೇಶಗಳಿಂದ ಬಂದ ರಾಯಭಾರಿಗಳೂ ಪ್ರವಾಸಿಗರೂ ಬರೆದಿಟ್ಟ ವರ್ಣನೆಗಳು ಹೃದಯಂಗಮವಾಗಿವೆ. ವಿಜಯನಗರದಲ್ಲಿಯ ಒಳ್ಳೇ ಮಹತ್ವದ ಕಟ್ಟಡಗಳಾದ ವಿಜಯವಿಠ್ಠಲನ, ಹಜಾರಿರಾಮ ಮುಂತಾದ ದೇವಾಲಯ ಗಳನ್ನು ಕಟ್ಟಿಸಿ ಶಿಲ್ಪಕಲೆಯನ್ನು ಪ್ರೋತ್ಸಾಹಿಸಿದನು. ನದಿಗೆ ಒಡ್ಡು ಹಾಕಿಸಿ

ಕಾಲುವೆಗಳನ್ನು ಹರಿಸಿದನು. ವಿದ್ವಾಂಸರಿಗೆ ಆಶ್ರಯ ವಿತ್ತನು. ಕನ್ನಡ ಹಾಗೂ ತೆಲುಗು ಭಾಷೆಗಳೆರಡೂ ಈತನ ಕಾಲದಲ್ಲಿ ಅಭಿವೃದ್ಧಿಯನ್ನು ಹೊಂದಿದವು ಪಂಪಾಪತಿಯ ದೇವಾಲಯಕ್ಕೆ ಸುಂದರವಾದ ಸಭಾಮಂದಿರವನ್ನು, ಗೋಪುರ ವನ್ನು ಕಟ್ಟಿಸಿದನು. ಕೃಷ್ಣದೇವರಾಯನು ಜನಾನುರಾಗಿಯಾಗಿದ್ದನು. ಆತನ ಕಾಲವೆಂದರೆ 'ಸುವರ್ಣಯುಗ' ಕೃಷ್ಣದೇವರಾಯನು ಕಲಾಪ್ರಿಯನೂ ಸಾಹಿತ್ಯಪ್ರಿಯನೂ, ಸಂಗೀತಪ್ರಿಯನೂ, ನೃತ್ಯಪ್ರಿಯನೂ, ಶಿಲ್ಪಕಲಾ ಪ್ರಿಯನೂ ಆಗಿದ್ದನು. ಈತನಿಗೆ ಆಹವಮಲ್ಲನೆಂದು ಬಿರುದು ಇದ್ದಿತು. ಯುದ್ಧದಲ್ಲಿ ಸೋಲೆಂಬುದೇ ಇರಲಿಲ್ಲ. ಯಾವ ಮುಸಲ್ಮಾನ ರಾಜನಿಗೂ ಕೃಷ್ಣದೇವರಾಯನ ಎದುರು ನಿಲ್ಲುವಷ್ಟು ಎದೆಗಾರಿಕೆ ಇರಲಿಲ್ಲ. ಮಹಾಪರಾ ಕ್ರಮಿ ಈತ. ವಿಜಯನಗರವು 'ಭೂಲೋಕದ ಸ್ವರ್ಗ'ವಿದ್ದಂತೆ ಇದ್ದಿತು.

ಈತನ ನಂತರ ಪಟ್ಟವೇರಿದ ಅಚ್ಯುತರಾಯನು 'ಅಚ್ಯುತರಾಯನ ಗುಡಿ ಮೊದಲಾದ ಕಟ್ಟಡಗಳನ್ನು ಕಟ್ಟಿಸಿದನು. ಅನಂತರ ಸದಾಶಿವ ರಾಯನು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಮಂತ್ರಿಯಾಗಿದ್ದ ಅಳಿಯ ರಾಮರಾಯನೇ ರಾಜ್ಯದ ಎಲ್ಲ ಸೂತ್ರಗಳನ್ನು ವಹಿಸಿ ರಾಜ್ಯಕಾರಭಾರ ಮಾಡುತ್ತಿದ್ದನು. ೧೫೬೫ರಲ್ಲಿ ಅಹಮ್ಮದನಗರ, ಗೋವಳಕೊಂಡ, ಬೀದರ, ವಿಜಾಪುರ ಮೊದಲಾದ ರಾಜರು ಒಟ್ಟುಗೂಡಿ ರಕ್ಕಸತಂಗಡಗಿಯ ಕಾಳಗದಲ್ಲಿ ಹಿಂದೂ ಸೈನಿಕರನ್ನು ಸೋಲಿಸಿ ರಾಮರಾಯನನ್ನು ಕೊಂದರು. ಮತ್ತು ಹಾಗೇ ಸಾಗಿ ವಿಜಯನಗರ ಪಟ್ಟಣವನ್ನು ಸುಲಿದು ನಾಮಶೇಷ ಮಾಡಿದರು.

ಅರವೀಡು ಮನೆತನ:— [೧೫೭೦ ರಿಂದ ೧೬೪೪] ರಕ್ಕಸತಂಗಡಗಿಯ ಯುದ್ಧದ ನಂತರ ರಾಜಧಾನಿಯು ಪೆನುಗೊಂಡೆಗೆ ಸ್ಥಳಾಂತರವಾಯಿತು. ರಾಮರಾಯನ ತಮ್ಮನಾದ ತಿರುಮಲನು ತಾನೇ ರಾಜ್ಯಸೂತ್ರವನ್ನು ವಹಿಸಿದನು. ಈತನು ಹಾಳಾದ ವಿಜಯನಗರದಲ್ಲಿಯೇ ರಾಜಧಾನಿಯನ್ನು ಮಾಡಲೆಳ್ಳಿಸಿದರೂ ಪ್ರಜೆಗಳು ಸಹಕಾರ ಕೋರದ್ದರಿಂದ ೧೫೮೫ ರಲ್ಲಿ ರಾಜ ಧಾನಿಯು ತಿರುಪತಿ ಬಳಿಯಲ್ಲಿದ್ದ ಚಂದ್ರಗಿರಿಗೆ ಸ್ಥಳಾಂತರವಾಯಿತು. ನಂತರ ವೆಲ್ಲೂರ ರಾಜಧಾನಿಯಾಯಿತು. ಅರವೀಡು ಮನೆತನದಲ್ಲಿಯೇ ವಿಜಯ ಸಾಮ್ರಾಜ್ಯದ ರಾಜಧಾನಿಯು ಪದೇ ಪದೇ ಬದಲಾಯಿತು. ಇದು ವಿಜಯ ನಗರ ಸಾಮ್ರಾಜ್ಯದ ಐತಿಹಾಸಿಕ ದೃಷ್ಟಿಕೋನ.

# ೨. ವಿಜಯನಗರ ಸಾಮ್ರಾಜ್ಯದ ರಾಜಮನೆತನದ ವಿವರಗಳು

## ಸಂಗಮ ವಂಶ

(೧೩೩೬ ರಿಂದ ೧೪೮೬)

| | |
|---|---|
| ಒಂದನೇ ಹರಿಹರ | ೧೩೩೬ ರಿಂದ ೧೩೫೫ |
| ಒಂದನೇ ಬುಕ್ಕರಾಯ | ೧೩೫೫ ರಿಂದ ೧೩೭೭ |
| ಎರಡನೇ ಹರಿಹರರಾಯ | ೧೩೭೭ ರಿಂದ ೧೪೦೪ |
| ಎರಡನೇ ಬುಕ್ಕರಾಯ | ೧೪೦೪ ರಿಂದ ೧೪೦೬ |
| ಒಂದನೇ ದೇವರಾಯ | ೧೪೦೬ ರಿಂದ ೧೪೨೨ |
| ವೀರ ವಿಜಯರಾಯ | ೧೪೨೨ ರಿಂದ ೧೪೨೩ |
| ಎರಡನೇ ದೇವರಾಯ | ೧೪೨೩ ರಿಂದ ೧೪೪೬ |
| ಮಲ್ಲಿಕಾರ್ಜುನರಾಯ | ೧೪೪೬ ರಿಂದ ೧೪೬೫ |
| ವಿರೂಪಾಕ್ಷರಾಯ | ೧೪೬೫ ರಿಂದ ೧೪೮೬ |

## ಸಾಳ್ವ ವಂಶ

(೧೪೮೬ ರಿಂದ ೧೫೦೮)

| | |
|---|---|
| ನರಸಿಂಹರಾಯ | ೧೪೭೮ ರಿಂದ ೧೪೯೦ |
| ಇಮ್ಮಡಿ ನರಸಿಂಹರಾಯ | ೧೪೯೦ ರಿಂದ ೧೫೦೩ |

## ತುಳುವ ವಂಶ

(೧೫೦೩ ರಿಂದ ೧೫೬೯)

| | |
|---|---|
| ವೀರ ನರಸಿಂಹರಾಜ | ೧೫೦೩ ರಿಂದ ೧೫೦೯ |
| ಶ್ರೀ ಕೃಷ್ಣದೇವರಾಯ | ೧೫೦೯ ರಿಂದ ೧೫೩೦ |

| | |
|---|---|
| ಅಚ್ಯುತರಾಯ | ೧೫೩೦ ರಿಂವ [೧೫೪೨ |
| ಸದಾಶಿವ ರಾಯ | ೧೫೪೨ ರಿಂದ ೧೫೬೮ |

## ಅರವೀಡು ವಂಶ

(೧೫೬೯ ರಿಂದ ೧೬೪೪)

| | |
|---|---|
| ರಾಮರಾಯ | ೧೫೫೧ ರಿಂದ ೧೫೬೫ |
| ತಿರುಮಲದೇವರಾಯ | ೧೫೬೯ ರಿಂದ ೧೫೭೨ |
| ಶ್ರೀರಂಗರಾಯ | ೧೫೭೨ ರಿಂದ ೧೫೮೫ |
| ವೆಂಕಟಪತಿರಾಯ | ೧೫೮೫ ರಿಂದ ೧೬೧೪ |
| ರಾಮರಾಯ [ಚಿಕ್ಕರಾಯ) | ೧೬೧೪ |
| ಪೆದ್ದವೆಂಕಟಪತಿರಾಯ | ೧೬೪೨ |
| ಅರನೆಯ ರಂಗರಾಯ | ೧೬೪೨। ರಿಂದ ೧೬೭೮ |
| ವೆಂಕಟಪತಿ ರಾಯ | ೧೬೭೮ ರಿಂದ ೧೬೮೦ |

ಇಲ್ಲಿಗೆ ವಿಜಯನಗರ ಸಾಮ್ರಾಜ್ಯದ ರಾಜಮನೆತನ ಮುಗಿಯಿತು.

———

## ೩. ಪೌರಾಣಿಕ ದೃಷ್ಟಿಕೋನ

ಪುರಾತನ ಕಾಲದಲ್ಲಿ ಪುರಾಣದ ಪ್ರಕಾರ ದಕ್ಷಿಣದಲ್ಲಿ ಮೂರು ರಾಜ್ಯಗಳಾದವು. ಮೊದಲನೆಯದು ರಾಕ್ಷಸರ ರಾಜ್ಯವು. ಅದು ಸಿಂಹಳ ದ್ವೀಪದಿಂದ ಹಿಡಿದು ದಕ್ಷಿಣದ ಕರಾವಳಿ ಪ್ರದೇಶದ ವರೆಗೆ. ಎರಡನೆಯದು ಕಿಷ್ಕಿಂಧೆ ತುಂಗಭದ್ರಾ ನದಿಯ ದಡದ ಮೇಲೆ ಅಂದರೆ ವಿಜಯನಗರ ಮತ್ತು ಆನೆಗುಂದಿ ಇರುವ ಸ್ಥಳ. ಈ ವಿಜಯನಗರವು ಇಂದು ಗುಡ್ಡಗಳಿಂದ ಆವೃತವಾಗಿರುತ್ತದೆ. ಮಾತಂಗ, ಮಾಲ್ಯವಂತ, ಹೇಮಕೂಟ, ಬಸವಶೃಂಗ ಮತ್ತು ಕಿಷ್ಕಿಂಧೆ ಗುಡ್ಡಗಳು. ಮಾತಂಗ ಪರ್ವತವನ್ನು ಸುಗ್ರೀವನು ಹತ್ತಿದನು. ಮೂರನೆಯದು ರತ್ನಾಪುರ ಇದು ಮಧ್ಯಭಾರತದಲ್ಲಿದ್ದಿತು.

ರಾಮಾಯಣದಲ್ಲಿಯ ಕೆಲವೊಂದು ನಾಟಕೀಯ ಅಂಶಗಳು ಕಿಷ್ಕಿಂಧೆಯಲ್ಲಿ ನಡೆದವು. ಈ ಕಿಷ್ಕಿಂಧೆ ಪಟ್ಟಣವೇ ಈಗಿನ ಹಂಪಿಯು. ಹಂಪಿಗೆ ದಕ್ಷಿಣದ ಕಾಶಿ ಎಂದೆನ್ನುತ್ತಾರೆ. ವನವಾಸದಲ್ಲಿರುವಾಗ ಸೀತಾದೇವಿಯನ್ನು ಕಳೆದುಕೊಂಡ ಶ್ರೀ ರಾಮಚಂದ್ರನು ಅವಳ ಶೋಧನೆಯ ಸಲುವಾಗಿ ತಿರುಗಾಡುತ್ತಿರಲು ಈ ಕಿಷ್ಕಿಂಧೆಯಲ್ಲಿ ವಾನರರ ರಾಜನಾದ ಸುಗ್ರೀವನ ಸಹಾಯವನ್ನು ಪಡೆದು ಅವರಲ್ಲಿಯ ಹನುಮಂತನೆಂಬ ವೀರನನ್ನು ದಕ್ಷಿಣಕ್ಕೆ ಸೀತಾದೇವಿಯ ಶೋಧನೆಯ ಸಲುವಾಗಿ ಕಳುಹಿಸಿದನು. ಮತ್ತು ಆವನು ಮರಳಿ ಬರುವವರೆಗೆ ಮಾಲ್ಯವಂತ ಬೆಟ್ಟದ ಮೇಲೆ ಪ್ರಶ್ರವಣವೆಂಬ ಭಾಗದಲ್ಲಿ ವಾಸಿಸಿದನು. ಮತ್ತು ಚಾತುರ್ಮಾಸದಲ್ಲಿ ಪ್ರತಿದಿನ ಪ್ರದೋಷ ಕಾಲದಲ್ಲಿ ಆವನು ಮಾಲ್ಯವಂತದಿಂದ ಹೇಮಕೂಟಕ್ಕೆ ಬಂದು ಪಂಪಾಪತಿಯ ದರ್ಶನ ತೆಗೆದುಕೊಳ್ಳುತ್ತಿದ್ದನು. ರಾಮಚಂದ್ರನು ಸೀತೆಯ ಕ್ಷೇಮ-ಸಮಾಚಾರವನ್ನು ಹನುಮಂತನಿಂದ ತಿಳಿದುಕೊಂಡು ಲಂಕೆಗೆ ವಾನರ ಸೈನ್ಯ ಸಮೇತವಾಗಿ ಹೋಗಿ ರಾವಣನನ್ನು ಸಂಹರಿಸಿ ಪತ್ನಿಸಮೇತನಾಗಿ ಪುನಃ ಪಂಪಾಪತಿಗೆ ಬಂದು ಪಂಪಾಪತಿಯ ಉತ್ಸವಗಳನ್ನು ಯಥಾಸಾಂಗವಾಗಿ ನೆರವೇರಿಸಿದನು. ಇಲ್ಲಿ ಸೀತಾದೇವಿಯ ಸ್ನಾನದಿಂದ ಪವಿತ್ರವಾದ ಸರೋವರಕ್ಕೆ "ಸೀತಾಸರೋವರ"

ಎಂದು ಹೆಸರು. ರಾಮನ ಬಾಣಗಳಿಂದ ವಾಲಿವಧೆಯಾದ ಸ್ಥಳಕ್ಕೆ "ವಾಲಿಕಾಷ್ಠ" ಎಂದು ಹೆಸರು. 'ಮಧುವನವು' ಸುಗ್ರೀವನ ಜೇನುಗೂಡಿನ ತೋಟವು. ರಾವಣನು ಸೀತಾದೇವಿಯನ್ನು ಒಯ್ಯುವ ಸಮಯದಲ್ಲಿ ತನ್ನ ಆಭರಣಗಳನ್ನು ಪಂಪಾಸರೋವರದಲ್ಲಿ ಚೆಲ್ಲಿದಳಂತೆ. ಅದೇ ಪಂಪಾಸರೋವರ ಆನೆಗುಂದಿಯಲ್ಲಿರುತ್ತದೆ. ಆನೆಗುಂದಿಯಲ್ಲಿಯ 'ಅಂಜನಾದೇವಿ ಬೆಟ್ಟ' ಹನುಮಂತನು ಜನಿಸಿದ ಸ್ಥಳ. ಪಂಪಾಸರೋವರದಲ್ಲಿಯ ಶಬರಿ ಆಶ್ರಮ' ರಾಮಾಯಣ ಪ್ರಸಿದ್ಧವಿರುತ್ತದೆ ಪಂಪಾ ಶಬ್ದವು ಪೌರಾಣಿಕ ಶಬ್ದವು. ತುಂಗಭದ್ರಾ ನದಿಗೆ ಪಂಪಾ ಎಂದು ಕರೆದರು. ಅದರ ದಂಡೆಯಲ್ಲಿಯ ಹಳ್ಳಿಗೆ 'ಪಂಪಾ' ಎಂದು ಕರೆದರು. ಮುಂದೆ ಪಂಪಾ ಎಂಬ ಹೆಸರು ನಶಿಸಿ 'ಹಂಪಿ' ಎಂದಾಯಿತು.

ಮುಂದೆ ಕಲಿಯುಗವು ಪ್ರಾರಂಭವಾಗಲು ಜನರಲ್ಲಿ ಭಕ್ತಿ ವಿಶ್ವಾಸಗಳು ಕಡಿಮೆಯಾಗತೊಡಗಿದವು. ಪಂಪಾಪತಿಯ ದೇವಾಲಯದ ಸುತ್ತಲೂ ಅರಣ್ಯ ಬೆಳೆದು ಅದು ಕ್ರೂರಮೃಗಗಳ ವಾಸಸ್ಥಾನವಾಗತೊಡಗಿತು. ಆದರೂ ಸಮೀಪ ದಲ್ಲಿದ್ದ ಮುನಿಗಳು ರಾತ್ರಿಯಲ್ಲಿ ವಿರೂಪಾಕ್ಷನನ್ನು ಪೂಜೆ ಮಾಡುತ್ತಿದ್ದರು. ಮುಂದೆ ಮೂರುನೂರು ವರ್ಷಗಳ ವರೆಗೆ ಪಂಪಾಪತಿಗೆ ಮಾನವನ ಪೂಜೆಯೇ ದುರ್ಲಭವಾಯಿತು. ಅನಂತರ ಮಾಧವಚಾರ್ಯನೆಂಬ ಬ್ರಾಹ್ಮಣನು ಅಲ್ಲಿಗೆ ಬಂದು ಸಹ್ಯದ ಪುರಾಣದಲ್ಲಿ 'ಸೌಮಿತ್ರೇ ಶೋಭತೇ ಪಂಪಾವೈಢೂರ್ಯ ವಿಮಲೋದಕಾ ಫುಲ್ಲಪದ್ಮೋತ್ಪಲವತೀ ಶೋಭಿತಾ ವಿವಿಧೈಃ ದೃಮೈಃ ಮುಂತಾಗಿ ವರ್ಣಿತವಾದ ಪಂಪಾಕ್ಷೇತ್ರವೇ ಇದು ಎಂದು ಭಾವಿಸಿ ಶ್ರೀ ಭುವನೇಶ್ವರಿಯನ್ನು ಪ್ರಸನ್ನೀಕರಿಸಿಕೊಳ್ಳಲು ತಪವನ್ನು ಮಾಡಿದನು. ಆತನಿಗೆ ಕನಸಿನಲ್ಲಿ ಭುವನೇಶ್ವರಿಯು ಬಂದು ಈ ಜನ್ಮದಲ್ಲಿ ನನ್ನ ಭೇಟಿಯು ಆಗಲಾರದು ಬೇರೆ ಇಚ್ಛೆ ಇದ್ದರೆ ಕೇಳಬಹುದು". ಎಂದು ಹೇಳಿದಳು. ಮರುದಿನ ಆ ಕ್ಷೇತ್ರಕ್ಕೆ ಓರ್ವ ಯತಿ ಬರಲು ಮಾಧವಚಾರ್ಯರು ಆತನಿಂದ ಸನ್ಯಾಸಾಶ್ರಮ ಸ್ವೀಕರಿಸಿ, ಪುನಃ ನಿರಶನವ್ರತದಿಂದ ಭುವನೇಶ್ವರಿಯ ಪ್ರೀತ್ಯರ್ಥವಾಗಿ ತಪವನ್ನು ಆಚರಿಸಿದನು. ಈ ಘೋರ ತಪಕ್ಕೆ ಮೆಚ್ಚಿ ಪ್ರಸನ್ನಳಾದ ಭುವನೇಶ್ವರಿಯು ದರ್ಶನವನ್ನಿತ್ತು ವರಪ್ರದಾನ ಮಾಡಿದಳು. ಮತ್ತು ದೇವಿಯು ಸುವರ್ಣದಾನದ ಅಭಯವನ್ನಿತ್ತಳು.

ಮಾಧವನು ತನಗೆ ಅನುಕೂಲನಾದ ಶಿಷ್ಯನು ದೊರೆತಮೇಲೆ ಅಳಿದ ಹೋದ ಕರ್ನಾಟಕ ಸಾಮ್ರಾಜ್ಯವನ್ನು ಕಟ್ಟಬೇಕೆಂದು ನಿರ್ಧರಿಸಿದನು. ಅಂತೆಯೇ ಸುದೈವವಶಾತ್ ಹರಿಹರನು [ಹಕ್ಕನು] ದೊರೆತ ಮೇಲೆ ಆತನಿಗೆ ಪಟ್ಟವನ್ನು ಕಟ್ಟಿ ಕರ್ನಾಟಕ ಸಾಮ್ರಾಜ್ಯವನ್ನು ಶಾಲಿವಾಹನ ಶಕೆ ಧಾತ್ರ ಸಂವತ್ಸರ ವೈಶಾಖ ಶುದ್ಧ ಸಪ್ತಮಿಯ ದಿವಸ ಶುಭಮುಹೂರ್ತದಲ್ಲಿ ಸ್ಥಾಪಿಸಿ ದನು. ಈ ಸುಪ್ರಸಿದ್ಧ ವಿಜಯನಗರ ಸಾಮ್ರಾಜ್ಯವು ಮೂರುನೂರ ವರ್ಷ ಗಳ ಪರ್ಯಂತ ವೈಭವವಾಗಿ ಮೆರೆಯಿತು.

೧೫೬೫ ರಲ್ಲಿಯ ರಕ್ಕಸಗಿತಂಗಡಗಿಯ ಕಾಳಗದ ನಂತರ ಮಹಮ್ಮ ದೀಯರು ವಿಜಯನಗರವನ್ನು ಪ್ರವೇಶಿಸಿ ಪಟ್ಟಣವನ್ನು ಹಾಳುಗೆಡವಿದರೂ ವಿರೂಪಾಕ್ಷ, ಯಂತ್ರೋದ್ಧಾರ ಹನುಮಂತ ಹಾಗೂ ಕೋದಂಡರಾಮನ ಗುಡಿಗಳು ಅಚ್ಚಳಿಯದೇ ಹಾಗೆ ನಿಂತಿವೆ. ಇದೆಲ್ಲ ದೈವಲೀಲೆ.

## ಹಂಪಿ ವಿರೂಪಾಕ್ಷ ಕ್ಷೇತ್ರ ಮಹಾತ್ಮೆ

ಸಹಸ್ರಾರು ವರ್ಷಗಳ ಹಿಂದೆ ಪರಮೇಶ್ವರನು ಕೈಲಾಸದಿಂದ ಹೊರಟು ತಪಸ್ಸಿಗಾಗಿ ಯೋಗ್ಯವಾದ ಸ್ಥಳವನ್ನು ಹುಡುಕುತ್ತ ದಕ್ಷಿಣ ದೇಶ ದಲ್ಲಿ ಸಾಗುತ್ತಿರಲು ತುಂಗಭದ್ರಾ ನದಿಯ ತೀರದಲ್ಲಿ ಮಾತುಂಗ ಮಾಲ್ಯ ವಂತ ಅಂಜನೆಯ ಋಷಿಮೂಕ ಮುಂತಾದ ಪರ್ವತಗಳ ಮಧ್ಯದಲ್ಲಿರುವ ಪ್ರಶಾಂತ ಸ್ಥಳದ ಸೌಂದರ್ಯಕ್ಕೆ ಮೆಚ್ಚಿ ಪವಿತ್ರವಾದ ಹೇಮಕೂಟ ಪರ್ವತ ದಲ್ಲಿ ಸಮಾಧಿಸ್ಥನಾಗಿ ತಪಸ್ಸನ್ನು ಪ್ರಾರಂಭಿಸಿದನು.

ಕೆಲಕಾಲದ ನಂತರ ಭೂಲೋಕದಲ್ಲಿ ತಾರಕಾಸುರನ ಉಪಟಳ ಮಿತಿ– ಮೀರಲು ದೇವತೆಗಳು ಬ್ರಹ್ಮದೇವನನ್ನು ಮೊರೆಹೊಕ್ಕರು. ಆತನ ಸಲಹೆಯ ಪ್ರಕಾರ ಮನ್ಮಥನನ್ನು ಮುಂದೆ ಮಾಡಿಕೊಂಡು ಹೇಮಕೂಟಕ್ಕೆ ಬಂದರು. ಮನ್ಮಥನು ಶಿವನ ತಪಸ್ಸನ್ನು ಕೆಡಿಸಲು ಶಿವನ ಉರಿಗಣ್ಣಿಗೆ ಆಹುತಿಯಾದನು. ಆತನಿಂದ ವಿರೂಪಾಕ್ಷನೆಂದು ಹೆಸರು ಬಂದಿತು. ಶಿವನ

ಉಗ್ರತೆಯ ಶಾಂತತೆಯ ಸಲುವಾಗಿ ಬ್ರಹ್ಮಪುತ್ರಿಯಾದ ಪಂಪಾಂಬಿಂಕೆಯು ಶಿವನ ಸೇವೆಯಲ್ಲಿ ತೊಡಗಿದಳು. (ಬ್ರಹ್ಮನು ಈ ಹಿಂದೆ ಇದೇ ಸ್ಥಳದಲ್ಲಿ ಯಜ್ಞಮಾಡುತ್ತಿರಲು ಆ ಯಜ್ಞಕುಂಡದಿಂದ ಆದಿಶಕ್ತಿಯು ಭುವನೇಶ್ವರಿ ಎಂಬ ಹೆಸರಿನಿಂದ ಅವತರಿಸಿ ತನ್ನ ಒಂದಂಶದಿಂದ ಪಂಪಾಂಬಿಂಕೆಯಾದಳು ) ನಂತರ ಮುನಿಗಳು ಶಿವನಿಗೆ ಈ ರೀತಿ ಪ್ರಾರ್ಥಿಸಿಕೊಂಡರು. ಬಹಳ ದಿನಗಳು ವರೆಗೆ ತಪಕ್ಕೆ ಕೂಡ್ರುವದರಿಂದ ಲೋಕ ಕಾರ್ಯಕ್ಕೆ ಹಾನಿಯಾಗುವದೆಂದು ಹೇಳಿ ದುಷ್ಟರ ಸಂಹಾರ ಮಾಡಬೇಕೆಂದು, ಬಹುಕಾಲದ ವರೆಗೆ ಶಿವನ ಧ್ಯಾನದಲ್ಲಿ ಮಗ್ನರಾದ ಪಂಪಾಂಬಿಕೆಯು ಪಾಣಿಗ್ರಹಣ ಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಅದರ ಪ್ರಕಾರ ಶಿವನು ಸಮ್ಮತಿಸಲು ಮಾರ್ಗಶಿರ ದಲ್ಲಿ ಲಗ್ನ ನಿಶ್ಚಯಮಾಡಿ, ಚೈತ್ರದಲ್ಲಿ ಮದುವೆಯನ್ನು ನೆರವೇರಿಸಬೇಕೆಂದು ನಿರ್ಧರಿಸಿದರು. ಆ ಪ್ರಕಾರ ಚೈತ್ರ ಶುದ್ಧ ತ್ರಯೋದಶಿಯ ಶುಭಮಹೂರ್ತ ದಲ್ಲಿ ಸಕಲ ದೇವತೆಗಳೂ ಹಾಗೂ ಮುನಿವರರ ಸಮಕ್ಷಮದಲ್ಲಿ ಅತ್ಯಂತ ವೈಭವದಿಂದ ಪಂಪಾ-ವಿರೂಪಾಕ್ಷರ ವಿವಾಹ ಮಹೋತ್ಸವ ಜರುಗಿತು. ಅಂದಿನಿಂದ ಇಲ್ಲಿಯವರೆಗೆ ಪರಶಿವನ ಆಜ್ಞೆಯಮೇರೆಗೆ ಪ್ರತಿವರ್ಷ ಚೈತ್ರ ಹುಣ್ಣಿಮೆಗೆ ವಿರೂಪಾಕ್ಷ-ಪಂಪಾದೇವಿಯವರ ರಥೋತ್ಸವ ನಡೆಯುತ್ತದೆ. ಈ ಮೆರೆಗೆ ಕೃತ್ರ ತ್ರೇತಾ, ದ್ವಾಪರ ಮತ್ತು ಈಗಿನ ಕಲಿಯುಗಗಳಲ್ಲಿ ನಡೆಯುತ್ತ ಬಂದಿರುತ್ತದೆ.

# ಭಾಗ ೨

## ಹಂಪಿಯಲ್ಲಿ ನೋಡತಕ್ಕ ಸ್ಥಳಗಳು

೧. ತುಂಗಭದ್ರಾ ಯೋಜನೆ ಮತ್ತು ಸಕ್ಕರೆ ಕಾರಖಾನೆ.

೨. ರಾಯರಕೆರೆ [ಈಗ ಬತ್ತಿಹೋಗಿರುವ ಕೆರೆ],

೩. ಜಂಬುನಾಥ ಗುಡಿ

೪. ಅನಂತಶಯನನ ಗುಡಿ ಸೂಳೆಭಾವಿ.

೫. ಮೂರು ಮಹಮ್ಮದಿಯರ ಗೋರಿಗಳು.

೬. ಕಡ್ಡಿರಾಮಪುರಂ ಹಳ್ಳಿ

೭. ಕೃಷ್ಣ ಸ್ವಾಮಿ ಗುಡಿ.

೮. ಚಿಕ್ಕ ವಿಷ್ಣುವಿನ ಮೂರ್ತಿ.

೯ ಎರಡು ದೊಡ್ಡದಾದ ಭಗ್ನವಾದ ಗಣಪತಿಗಳು.(ಸಾಸಿವೆ ಕಾಳು ಮತ್ತು ಕಡಲೆಕಾಳು]

೧೦. ಹೇಮಕೂಟ ಪರ್ವತ.

೧೧. ಜೈನ ಬಸ್ತಿಗಳ ಗುಂಪುಗಳು. ಕಾಶಿ ವಿಶ್ವನಾಥ ಗುಡಿ ಮತ್ತು ಇತರ ಹಿಂದೂ ಗುಡಿಗಳು.

೧೨. ಪಂಪಾಪತಿ ಗುಡಿ, ಶಬರಿ ಆಶ್ರಮ.

೧೩. ಭುವನೇಶ್ವರಿ ಗುಡಿ.

೧೪. ಗುಲಗಂಜಿ ಮಾಧವಸ್ವಾಮಿ ಗುಡಿ.

೧೫. ವಿದ್ಯಾರಣ್ಯಸ್ವಾಮಿ ಗುಡಿ.

೧೬. ಲೋಕಪಾವನ ಕೆರೆ.

೧೭. ಮನ್ಮಥ ಗುಂಡ.

೧೮. ಮಾತಂಗ ಬೆಟ್ಟ: ಹಂಪಿಯ ಪಕ್ಷಿನೋಟವನ್ನು ಇದ ನ್ನು ಏರಿ ಮೇಲೆ ಹೋದರೆ ಕಾಣಬಹುದು.

೧೯. ಕೋದಂಡರಾಮ.

೨೦. ಯಂತ್ರೋದ್ಧಾರಕ ಗುಡಿಗಳು.
೨೧. ಚಕ್ರತೀರ್ಥ.
೨೨. ವರಾಹ ಗುಡಿ,
೨೩. ಅಚ್ಯುತರಾಯ ಗುಡಿ.
೨೪. ಅನಂತಶಯನ ಗುಡಿ,
೨೫. ಸುಗ್ರೀವನ ಗುಹೆ.
೨೬. ಸೀತೆಯ ಸೆರಗು ಮತ್ತು ಸೀತಾ ಸರೋವರ.
೨೭. ರಾಮ-ಲಕ್ಷ್ಮಣರ ಪಾದಗಳು.
೨೮. ಕಲ್ಲಿನ ಕಟ್ಟಡದ ಸೇತುವೆಯ ಅವಶೇಷಗಳು
೨೯. ವಿಠ್ಠಲರಾಯ ಗುಡಿ.
೩೦. ವಾಲಿಕಾಷ್ಠವು.
೩೧- ವ್ಯಾಸರಾಯನ ಮಂಟಪವು.
೩೨. ಬಡವಿಲಿಂಗ.
೩೩. ಉಗ್ರನರಸಿಂಹನ ಭಗ್ನ ಮೂರ್ತಿ.
೩೪. ಚಾಮುಂಡೇಶ್ವರಿ ಗುಡಿ.
೩೫. ಉದ್ದನ ವೀರಭದ್ರಸ್ವಾಮಿ ಗುಡಿ.
೩೬. ಅಕ್ಕತಂಗಿಯರ ಬಂಡೆಗಲ್ಲುಗಳು.
೩೭. ಸುರಂಗಮಾರ್ಗದಲ್ಲಿ ಗುಡಿಗಳು.
೩೮. ಹಝಾರಿರಾಮನ ಗುಡಿ.
೩೯. ರಾಣಿಯಅರಮನೆಯ ಅಸ್ತಿವಾರ.
೪೦. ತುಲಾಭಾರ ಮಂಟಪ.
೪೧. ದಾಸರ ಮಂಟಪ.
೪೨. ಮಾಸ್ತಿಗಲ್ಲು.
೪೩, ಡಣಾಯಕನ ಗೋಪುರ
೪೪ ವಿಶ್ರಾಂತಿ ಮಂದಿರ.
೪೫, ವ್ಯಾಸರಾಯ ಮಂಟಪ.
೪೬. ಕಮಲ ಮಹಲ.

೪೭ ಕಾವಲಿನ ಗೋಪುರ.
೪೮. ರಕ್ಷಣಾದಳ ಸಾಲೆ.
೪೯. ಗಜ ಶಾಲೆಗಳು.
೫೦. ರಂಗನಾಥನ ಗುಡಿ.
೫೧. ದಫ್ತರಖಾನಾ.
೫೨. ಪಟ್ಟಣದ ಎಲ್ಲಮ್ಮನ ಗುಡಿ.
೫೩. ಅಖಂಡ ಕಲ್ಲಿನ ಮಂಟಪ.
೫೪. ಭಗ್ನವಾದ ಕಲ್ಲಿನ ಬಾಗಿಲು.
೫೫. ಕಲ್ಲಿನ ತೇರು.
೫೬. ದಸರಾ ದಿಬ್ಬ.
೫೭. ಸಾರ್ವಜನಿಕ ಸ್ನಾನಗೃಹ.
೫೮. ಋಷ್ಯಮೂಕ.
೫೯. ಅಷ್ಟಾಕರ ಜಲಾಶಯ.
೬೦. ರಾಣಿಯರ ಸ್ನಾನಗೃಹ.
೬೧. ಚಂದ್ರಶೇಖರ ಗುಡಿ.
೬೨. ಸರಸ್ವತೀ ಗುಡಿ.
೬೩. ಕೃಷ್ಣದೇವರಾಯನ ಸಿಮೆಂಟ ಪ್ರತಿಮೆ.
೬೪. ಶಿಲ್ಪಕಲೆಗಳು.
೬೫ ತಳವಾರ ಘಟ್ಟ.
೬೬. ಹುಚ್ಚಪ್ಪಯ್ಯನ ಮಠ.
೬೭. ಕಪಿಲಾಶ್ರಮ.
೬೮. ಚಿಂತಾಮಣಿ ಆಶ್ರಮ.
೬೯. ಗಗನ ಮಹಲ.
೭೦. ಗವಿ ರಂಗನಾಯಕ.
೭೧. ಅಂಜನಾದ್ರಿ.
೭೧. ಮಧುವನ.

೨೩. ಸಂಪಾ ಸರೋವರ.
೨೪. ಮಾನಸ ಸರೋವರ.
೨೫. ಕೃಷ್ಣದೇವರಾಯನಸಮಾಧಿ.
೨೬. ನವವೃಂದಾವನ.
೨೭. ಭೀಮನ ಬಾಗಿಲು.
೨೮. ಹನುಮನ ಬಾಗಿಲು.
೨೯. ಪಟ್ಟಾಭಿರಾಮನ ಗುಡಿ.
೩೦. ತಿಮ್ಮಪ್ಪನ ಗುಡಿ.
೩೧. ವೀರಭದ್ರಸ್ವಾಮಿ ಗುಡಿ.
೩೨. ಚಂಡಿಕೇಶ್ವರಿ ಗುಡಿ.
೩೩. ದಶಾವತಾರದ ಕೆತ್ತನೆ ಕೆಲಸ.
೩೪, ಕೃಷ್ಣಸ್ವಾಮಿ ಗುಡಿ.
೩೫. ಮಾಲ್ಯವಂತನ ಗುಡ್ಡ.
೩೬. ಜಲವಿದ್ಯುತ್ತ ಉತ್ಪಾದನಾ ಕೇಂದ್ರ.



# ಭಾಗ ೨.

# ಹಂಪಿಯ ಪ್ರೇಕ್ಷಣೀಯ ಸ್ಥಳಗಳು

## ಸ್ಥೂಲ ವಿವರಣೆ

ಆ ಸಾಮ್ರಾಜ್ಯದ ರಾಜಧಾನಿಯಕಟಾ ಆ ರಾಜರಾ ವೈಭವಮಂ|
ಆ ಸಾಮಂತ ಸಚೀವರಾ ಬುಧ ಸಭಾಸ್ಥಾನಂಗಳಾ ವಿದ್ಯೆಯು||
ಆ ಸೋಮಸಾನೆಯರ್ ಪ್ರಮತ್ ನೃಪಪುತ್ರರ್ ಘೋಷಿಪಾವಂದಿಗಳ್|
ಆ ಸರ್ವರ್ ಮರೆಯಾದರಾರವಶದಿಂದಾ ಕಾಲಗೀ ವಂದನಂ||

—ಶಾಂತಕವಿಗಳು

## ಹೊಸಪೇಟೆಯ ರೈಲು ನಿಲ್ದಾಣ

ಹುಬ್ಬಳ್ಳಿಯಿಂದ ಗುಂತಕಲ್ಲಿಗೆ ಹೋಗುವ ರೈಲುಗಳು ಹೊಸಪೇಟೆ ಮಾರ್ಗವಾಗಿ ಹೋಗುತ್ತವೆ. ಇನ್ನು ಬೆಂಗಳೂರು, ಸೊಲ್ಲಾಪುರದಿಂದ ಬರುವವರಿಗೆ ಗುಂತಕಲ್ಲಿನಿಂದ ಇಲ್ಲಿಗೆ ಬರಲು ರೈಲು ಅನುಕೂಲವಿದೆ. ಸೊಲ್ಲಾಪುರದಿಂದ ರೈಲು ಮಾರ್ಗವಾಗಿ ಬರಬೇಕಾದರೆ ಗದಗ ಮಾರ್ಗವಾಗಿ ಬರಬೇಕಾಗುತ್ತದೆ. ಗಂಗಾವತಿ ಮಾರ್ಗವಾಗಿ ಬಸ್ಸಿನಿಂದ ಬರಬಹುದು. ಹರಿಹರದಿಂದ ಕೊಟ್ಟೂರು ಮಾರ್ಗವಾಗಿ ಬಸ್ಸಿನ ಸೌಕರ್ಯವಿರುತ್ತದೆ. ಕೊಟ್ಟೂರಿಂದ ಬಸ್ಸಿನ ಅಥವಾ ರೈಲಿನ ಸೌಕರ್ಯವಿರುತ್ತದೆ. ಹೊಸಪೇಟೆಯು ಬಳ್ಳಾರಿ ಜಿಲ್ಹೆಯಲ್ಲಿರುತ್ತದೆ. ರೈಲು ನಿಲ್ದಾಣದಲ್ಲಿ ಭೋಜನ ಗೃಹಗಳಿವೆ ವೇಟಿಂಗ ರೂಮುಗಳು ಇರುತ್ತವೆ. ವಿಜಯನಗರವು (ಹಂಪೆ) ಇಲ್ಲಿಂದ ಎಂಟು ಮೈಲು ಇರುತ್ತದೆ. ಅಲ್ಲಿಯವರೆಗೆ ಬಸ್ಸಿನಿಂದ ಹೋಗಬಹುದು. ಹೊಸಪೇಟೆಯಿಂದ ಕಂಪ್ಲಿಗೆ ಹೋಗುವ ಬಸ್ಸು ಕಮಲಾಪುರ ಬಂಗ್ಲೆಯ ಮೇಲೆ ಹಾಯ್ದು ಹೋಗುತ್ತದೆ. ಕಮಲಾಪುರ ಬಂಗ್ಲೆಯಿಂದ ಎರಡು ಫರ್ಲಾಂಗಿಗೆ ವಿಜಯನಗರದ ಅವಶೇಷಗಳು ಹತ್ತುತ್ತವೆ. ಹಂಪೆಯು ಎರಡು ಮೈಲು ದೂರದಲ್ಲಿರುತ್ತದೆ. ಹಂಪೆಯು ಈಗ ಹಾಳು ಬಿದ್ದುದರ ಪ್ರಯುಕ್ತ ಯಾವ ಊಟ-ಉಪಚಾರವು ದೊರಕದ್ದರಿಂದ ಪ್ರಯಾಣಿಕರು ಹೊಸಪೇಟೆಯಲ್ಲಿ ಪೂರ್ವ ತಯಾರಿಯನ್ನು ಮಾಡಿಕೊಳ್ಳಬೇಕು.

# ಹೊಸಪೇಟೆ ನಗರವೀಕ್ಷಣೆ

ಹೊಸಪೇಟೆ ನಗರವು ಸಾಧಾರಣವಾಗಿ ದೊಡ್ಡದು. ಆಧುನಿಕ ಸಲಕರಣೆಗಳಿಂದ ಕೂಡಿದ ಪ್ರವಾಸಿ ಮಂದಿರಗಳು ಇರುತ್ತವೆ. ಮನರಂಜನೆಗಾಗಿ ಚಲನಚಿತ್ರಗೃಹಗಳು ಇರುತ್ತವೆ. ರಾತ್ರಿಯಲ್ಲಿ ವಿದ್ಯುತ್ತ ದೀಪದಿಂದ ತುಂಗಭದ್ರಾ ಅಣೆಕಟ್ಟು ಅಲಂಕೃತವಾಗಿರುತ್ತದೆ. ಸಕ್ಕರೆ, ಗೊಬ್ಬರ ಕಾರಖಾನೆ ಇರುತ್ತದೆ. ತುಂಗಭದ್ರಾ ಆಣೆಕಟ್ಟು ೧೫೦ ಯಾರ್ಡು ಉದ್ದವಿರುತ್ತದೆ. ಎತ್ತರ ೧೬೨ ಅಡಿ ಇರುತ್ತದೆ. ಜಲಾಶಯದ ವಿಸ್ತೀರ್ಣ ೧೪೬ ಚದುರ ಮೈಲುಗಳು. ಬೃಂದಾವನ ಮಾದರಿಯ ತೋಟವಿರುತ್ತದೆ. ಪ್ರವಾಸಿಗರ ಭೂನಂದನವನ ಆಗಿರುತ್ತದೆ.

## ಜಂಬುನಾಥ ದೇವಾಲಯ

ಹೊಸಪೇಟೆಯಿಂದ ಸುಮಾರು ಮೂರು ಮೈಲು ಅಂತರದ ಮೇಲೆ ಮೂರುಸಾವಿರ ಅಡಿ ಎತ್ತರವಾದ ಗುಡ್ಡದ ಮೇಲೆ ಜಂಬುನಾಥನ ದೇವಾಲಯವು ನಯನಮನೋಹರವಾದ ಸೃಷ್ಟಿಸೌಂದರ್ಯದಲ್ಲಿದೆ.

## ಅನಂತಶಯನ ಗುಡಿ

ಹೊಸಪೇಟೆಯಿಂದ ಹಂಪೆಗೆ ಹೋಗುವ ದಾರಿಯಲ್ಲಿ ಒಂದುವರೆ ಕಿ.ಮೀ ಕ್ರಮಿಸಿದ ನಂತರ ಒಂದು ರೈಲು ಹಳಿ ಹತ್ತುತ್ತದೆ. ಅಲ್ಲಿಯೇ ಅನಂತಶಯನನ ಭವ್ಯವಾದ ದೇವಾಲಯವಿರುತ್ತದೆ. ಗುಡಿಯ ಸುತ್ತಲಿನ ಪ್ರದೇಶದಲ್ಲಿ ಅನಂತಶಯನ ಹಳ್ಳಿ ಇರುತ್ತದೆ. ಗುರ್ಭಗುಡಿಯ ಮೇಲೆ "ವಿಮಾನಾಕಾರವುಳ್ಳ" ಮಾಳಿಗೆಯುಂಟು. ಈ ಗುಡಿಯು ೧೫೨೪ ರಲ್ಲಿ ಕೃಷ್ಣದೇವರಾಯನಿಂದ ಕಟ್ಟಲ್ಪಟ್ಟಿತು. ಈ ಗುಡಿಯಲ್ಲಿ ವಿಗ್ರಹವಿರುವುದಿಲ್ಲ.

## ಸೂಳೆಯ ಭಾವಿ

ಮುಂದೆ ಒಂದು ಮೈಲು ಕ್ರಮಿಸಲು ದಾರಿಗೆ ಹೊಂದಿ ಎಡಬದಿಯ ಹೊಲದಲ್ಲಿರುವ ಈ ಭಾವಿಯು ಇನ್ನೂ ಉತ್ತಮ ಸ್ಥಿತಿಯಲ್ಲಿರುತ್ತದೆ. ಕೆಳಗಿಳಿಯಲು ಪಾವಟಣಿಗೆಗಳುಂಟು.

## ೫. ಮಲಪನ ಗುಡಿ

ಸೂಳೆಯ ಭಾವಿಯಿಂದ ತುಸು ಮುಂದಕ್ಕೆ ಹೋದರೆ ಬೀದಿಯ ಬಲಕ್ಕೆ ಈ ಗುಡಿ ಇರುತ್ತದೆ. ಈ ಗುಡಿಗೆ ದೇವರಾಯನು ೧೪೧೦ರಲ್ಲಿ ದಾನಮಾಡಿದ ಬಗ್ಗೆ ಶಿಲಾಲೇಖನವಿರುತ್ತದೆ. ಇದಕ್ಕೆ ಮಲ್ಲಿಕಾರ್ಜುನ ಗುಡಿ ಎಂದು ಹೆಸರು. ಈಗ ಸಾಗಿರುವ ದಾರಿಯೇ ಪೂರ್ವಕಾಲದ ವಿಸ್ತಾರವಾದ ರಾಜಮಾರ್ಗವು.

## ಬೀದಿ ಬಾಗಿಲು

ದಾರಿಯಲ್ಲಿ ಎರಡು ಬೀದಿ ಬಾಗಿಲುಗಳು ಹತ್ತುತ್ತವೆ. ಮುಂದೆ ಸಾಗುವ ದಾರಿಯಲ್ಲಿ ಯಾವ ಮಹತ್ವದ ಕಟ್ಟಡಗಳು ಹತ್ತುವದಿಲ್ಲ. ಪಾಳಾದ ಗುಡಿಗಳು ಸಿಗುತ್ತವೆ. ಒಂದೆರಡು ಕಾಲುವೆಗಳನ್ನು ದಾಟಬೇಕಾಗುತ್ತದೆ. ಮುಂದೆ ಐದು ಮೈಲುಗಳ ನಂತರ ದಾರಿ ಇಬ್ಭಾಗವಾಗುತ್ತದೆ. ಬಲಗಡೆಯ ದಾರಿ ಕಮಲಾಪುರಕ್ಕೆ ಎಡಗಡೆ ದಾರಿ ಹಂಪಿಗೆ ಹೋಗುತ್ತದೆ.

## ಮಹಮ್ಮದೀಯರ ಗೋರಿಗಳು

ಎಡಗಡೆಯ ದಾರಿಯಿಂದ ಸಾಗಿದರೆ ಒಂದೆರಡು ಕೋಟೆಯ ಅವಶೇಷಗಳು ಹತ್ತುತ್ತವೆ. ದಾರಿಯ ಎಡಬದಿಗೆ ಮುಸಲ್ಮಾನರ ಗೋರಿಗಳಿರುತ್ತವೆ. ಇವು ಕಡ್ಡಿರಾಮಪುರದಲ್ಲಿರುತ್ತವೆ.

## ಕಾಮಲಾಪುರ

ಕಡ್ಡಿರಾಮಪುರದಿಂದ ಬಲಕ್ಕೆ ತಿರುಗಿದರೆ ಕಾಮಲಾಪುರದ ಕೋಟೆ ಕಣ್ಣಿಗೆ ಬೀಳುತ್ತದೆ. ರಾಣಿ ಕಮಲಾದೇವಿಯ ಸ್ಮರಣಾರ್ಥವಾಗಿ ಶ್ರೀ ಕೃಷ್ಣದೇವರಾಯನು ಈ ಪುರವನ್ನು ಕಟ್ಟಿಸಿದ್ದನೆಂದು ಇತಿಹಾಸ ಹೇಳುತ್ತದೆ. ಈ ಕಮಲಾಪುರವು ಕೇಂದ್ರ ಸ್ಥಳವು. ಇಲ್ಲಿಂದ ಹಂಪೆಯ ವರೆಗೆ ಸಿಮೆಂಟ ರಸ್ತೆ ಇರುವದು. ಸರಕಾರೀ ಪ್ರವಾಸಿ ಮಂದಿರವಿದೆ.

## ಹೇಮಕೂಟ ಪರ್ವತ

ಕೆಲವು ಅಂತರದ ಮೇಲೆ ಹೇಮಕೂಟ ಪರ್ವತವು ಬರುವದು. ಪರ್ವತದ ತುತ್ತತುದಿಯಲ್ಲಿ ಚೌಕೋನಾಕೃತಿಯ ಒಂದು ದೇವಾಲಯವಿದೆ. ಈ ದೇವಾಲಯದೊಳಗೆ ಚಿಕ್ಕದಾದ ವಿಷ್ಣುಪಾದ ಗುಡಿ, ಬೃಹದಾಕಾರವಾದ 'ಸಾಸಿವೆ-ಕಡಲೆಕಾಳ ಗಣಪ್ಪನ ಗುಡಿ ಹತ್ತುತ್ತವೆ.

## ಸಾಸಿವೆಕಾಳ ಗಣಪತಿ ಗುಡಿ

ಒಂದು ದೊಡ್ಡ ಬಂಡೆಯಲ್ಲಿ ಗಣಪನ ಮೂರ್ತಿ ಕೊರೆದು ಅದಕ್ಕೆ ಈ ರೀತಿ ಹೆಸರಿಟ್ಟಿದ್ದಾರೆ. ಇದು ಸುಮಾರು ಎಂಟು ಅಡಿ ಎತ್ತರವಿದೆ

## ಕಡಲೆಕಾಳು ಗಣಪತಿ

ಇದರ ಆಕಾರ ಭವ್ಯವಾಗಿದೆ. ಮೂರ್ತಿ ದೊಡ್ಡದು ಸುಮಾರು ಹದಿನಾರು ಅಡಿ ಎತ್ತರವಿದೆ. ಈಗ ವಿಗ್ರಹ ಒಂದು ಭಿನ್ನವಾಗಿವೆ. ಸಭಾಮಂಟಪದ ಮುಂಬದಿಗಿರುವ ನೋಟ ಕಂಬಗಳ ಸಾಲು ರೋಮನಗಡದ ವೈಭವವನ್ನು ಕಣ್ಮುಂದೆ ತರುತ್ತವೆ.

## ವಿರೂಪಾಕ್ಷನ ಗುಡಿ

ಹೇಮಕೂಟದ ಉತ್ತರಕ್ಕೆ ತುಂಗಭದ್ರಾ ನದಿಯು ದಡದ ಮೇಲೆ ವಿಜಯನಗರದ ರಾಯರ ಅಧಿದೇವತೆಯಾದ ಪಂಪಾಪತಿಯ ದೇವಸ್ಥಾನವು ಪೂರ್ವಕಾಲದಿಂದಲೂ ಪ್ರಸಿದ್ಧವಿರುತ್ತದೆ. ಕೃಷ್ಣದೇವರಾಯನು ಈ ಗುಡಿಯಹೆಬ್ಬಾಗಿಲಿನ ಹನ್ನೊಂದನೆಯ ಅಂತಸ್ತನ್ನು ಗುಡಿಯ ರಂಗಮಂಟಪವನ್ನು ಕಟ್ಟಿಸಿದನು. ಈ ಗೋಪುರಕ್ಕೆ ಬಿಷ್ಟಪ್ಪಯ್ಯನ ಗೋಪುರ ಎಂದು ಹೆಸರು. ಇದು ಒಂದು ನೂರಾ ಅರವತ್ತೈದು ಅಡಿ ಎತ್ತರ ಇದೆ. ತಳಪಾಯದ ಅಗಲ ೧೫೦ × ೧೨೦ ಅಡಿ. ಉತ್ತರ ದಿಕ್ಕಿನಲ್ಲಿ ಮತ್ತೊಂದು ಗೋಪುರವಿದೆ ಇದಕ್ಕೆ "ಕನಕಗಿರಿ ಗೋಪುರ" ಎಂದು ಹೆಸರು. ಈ ಗೋಪುರದಿಂದಲೇ ತುಂಗಭದ್ರಾ ನದಿಗೆ ಹೋಗುವ ದಾರಿಯು.

ವಿರೂಪಾಕ್ಷನ ಗುಡಿಯಲ್ಲಿ ಎರಡು ಪ್ರಾಕಾರಗಳಿದ್ದು ಮೊದಲನೆಯ ಪ್ರಾಕಾರವು ೨೦೮ ಅಡಿ ಉದ್ದ ೧೩೪ಅಡಿ ಅಗಲವಿರುತ್ತದೆ. ಪರಸ್ಥಳದ ಜನರ ಅನುಕೂಲತೆಗಾಗಿ ಇರುತ್ತವೆ. ಒಳಗಿನ ಪ್ರಾಕಾರದ ಮಧ್ಯದಲ್ಲಿ ಶ್ರೀ ವಿರೂಪಾಕ್ಷೇಶ್ವರನ ಮುಖ್ಯಗುಡಿ ಉಂಟು. ಇಲ್ಲಿ ಹಿಂದುಗಳು ಮಾತ್ರ ಪ್ರವೇಶಿಸಬಹುದು. ಶ್ರೀ ಭುವನೇಶ್ವರಿ ಗುಡಿಯೂ ಗುಲಗಂಜಿ ಮಾಧವನ ಗುಡಿಯೂ ಇದೇ ಪ್ರಾಕಾರದಲ್ಲಿವೆ. ವಿರೂಪಾಕ್ಷನ ಗುಡಿಯ ಹಿಂಬದಿಗೆ ವಿದ್ಯಾರಣ್ಯರ

ಮೂರ್ತಿಯೂ ಅದರ ಬಲಗಡೆಗೆ ಅವರು ತಪವನ್ನಾಚರಿಸಿದ "ಲೋಕಪಾವನ ತೀರ್ಥ"ವೆಂಬ ಸರೋವರವು ಇರುತ್ತದೆ ಈ ಗುಡಿಗೆ ಇನಾಮುಭೂಮಿಗಳಿರುತ್ತವೆ. ದೇವರಿಗೆ ನಿತ್ಯ ಪೂಜೆಯಾಗುತ್ತದೆ. ದೇವದರ್ಶನಕ್ಕೆ ಕಾಯಿಒಡೆಸುವದಕ್ಕೆ ಮತ್ತು ಪೂಜೆ ಮುಂತಾದವುಗಳಿಗೆ ಹಣವನ್ನು ಕೊಡಬೇಕಾಗುತ್ತದೆ.

## ಹಂಪೆಯ ಬೀದಿ

ಶ್ರೀ ವಿರೂಪಾಕ್ಷ ಗುಡಿಯ ಎದುರು ಸುಮಾರು ಒಂದು ಕಿ. ಮಿ. ಉದ್ದವಾದ ಒಂದು ವಿಶಾಲವಾದ ಬಯಲು ಪ್ರದೇಶವೇ ಹಂಪೆಯ ಪೇಟೆಯು. ಎರಡೂ ಕಡೆಗೂ ಕಲ್ಲಿನ ಕಟ್ಟಡಗಳಿರುತ್ತವೆ. ಅವೆಲ್ಲವೂ ಈಗ ಹಾಳಾಗಿರುತ್ತವೆ. ಇಲ್ಲಿಯೇ ಈಗ ರಥವನ್ನು ಎಳೆಯುತ್ತಾರೆ. ಅಂದಿನ ಕಲ್ಲಿನ ರಥದ ಬದಲಾಗಿ ಕಟ್ಟಿಗೆಯ ರಥಗಳಿರುತ್ತವೆ. ಚೈತ್ರಮಾಸದಲ್ಲಿ ಈ ರಥವನ್ನು ಎಳೆಯುತ್ತಾರೆ.

## ಮಾತಂಗ ಪರ್ವತ

ಈ ಮಾತಂಗ ಪರ್ವತ ನೋಡಲು ಕಲ್ಲಿನ ಪಾವಟಿಗೆಗಳು ಇರುತ್ತವೆ. ಇಲ್ಲಿಂದ ಸೂರ್ಯೋದಯದ ಹಾಗೂ ಸೂರ್ಯಾಸ್ತದ ನಯನ ಮನೋಹರವಾದ ದೃಶ್ಯವನ್ನು ನಾವು ವೀಕ್ಷಿಸಬಹುದು. ಮಹರ್ಷಿ ಮಾತಂಗ ಇಲ್ಲಿಯೇ ತಪಗೈದರೆಂದು ಪ್ರತೀತಿಯಿದೆ. ಅವರ ವಿಗ್ರಹವೂ ಇದೆ.

## ಋಷ್ಯಮೂಕ ಪರ್ವತ

ಮಾತಂಗ ಪರ್ವತದ ಬದಿಗೆ ಸ್ವಲ್ಪ ಹಿಂದೆ ಎಡಭಾಗದಲ್ಲಿ ನದಿಗೆ ಹೋಗಲಿಕ್ಕೆ ಕಾಲು ದಾರಿಯೊಂದಿದೆ. ಈ ದಾರಿಯಿಂದ ನದೀ ತೀರಕ್ಕೆ ಬಂದರೆ ಎದುರಿಗೆ ಹೊಂದಿಸಿ ಇಟ್ಟ ಹಾಗೆ ಕಲ್ಲುಬಂಡೆಗಳು ಕಾಣುತ್ತವೆ. ಅದೇ ಋಷ್ಯಮೂಕ ಪರ್ವತ. ಅಲ್ಲಿಗೆ ಯಾರೂ ಹೋಗುವ ಹಾಗಿಲ್ಲ. ಅದಕ್ಕೆ ಒಂದು ದಂತಕಥೆ ಇದೆ.

## ಚಕ್ರತೀರ್ಥ

ಅಲ್ಲಿಂದ ಕಿರುದಾರಿಯ ಮೂಲಕ ಸಾಗಿದರೆ ವಿಶಾಲವಾದ ಕಲ್ಲುಹಾಸಿಗೆ ಕಾಣುತ್ತದೆ. ತುಂಗಭದ್ರೆಯು ಇಲ್ಲಿಯವರೆಗೆ ಪೂರ್ವದಿಕ್ಕಿಗೆ ಹರಿಯುತ್ತ ಬಂದು ಮುಂದೆ ಉತ್ತರಕ್ಕೆ ಹೊರಳುತ್ತಾಳೆ. ನದಿ ತಡೆದು ಮುಂದೆ ಹೋಗ ಳಿರುವದಕ್ಕೆ ಚಕ್ರತೀರ್ಥ ಎನ್ನುತ್ತಾರೆ. ಇಲ್ಲಿ ನದಿಯ ನೀರು ಸದಾ ತಿರುಗು ತ್ತಿರುತ್ತದೆ.

## ಕೋದಂಡರಾಮನ ಗುಡಿ

ಈ ಗುಡಿಯು ಚಕ್ರತೀರ್ಥದ ಮೇಲೆ ಇರುತ್ತದೆ. ತುಂಗಭದ್ರೆಯು ಹಾಗೂ ಗುಡ್ಡಗಳ ನೋಟದ ಸೊಬಗು ಸೌಂದರ್ಯವಾಗಿದೆ. ಈ ಮಂದಿರ ದಲ್ಲಿ ಶ್ರೀ ರಾಮನು ಧನುರ್ಧಾರಿಯಾಗಿ ನಿಂತಿದ್ದಾನೆ.ರಾಮ-ಲಕ್ಷ್ಮಣ-ಸೀತಾ ಇವರ ವಿಗ್ರಹವಿದೆ. ಕೆತ್ತನೆಯ ಕಲೆ ಸುಂದರವಾಗಿದೆ. ಇಲ್ಲಿ ಪ್ರತಿದಿನ ಪೂಜೆ ನಡೆಯುತ್ತದೆ.

## ಸೂರ್ಯನಾರಾಯಣನ ಗುಡಿ

ಈ ಗುಡಿಯು ಕೋದಂಡರಾಮನ ಗುಡಿಯ ಹಿಂದೆ ಇರುತ್ತದೆ. ಸೂರ್ಯನ ವಿಗ್ರಹವಿರುತ್ತದೆ. ಹದಿನಾರು ಕೈಗಳುಳ್ಳ ಏಳು ಕುದುರೆಗಳು ರಥ ವನ್ನು ಎಳೆಯುವ ಸೂರ್ಯನ ವಿಗ್ರಹವು ಬಹಳ ಸುಂದರವಾಗಿರುತ್ತದೆ.

## ಯಂತ್ರೋದ್ಧಾರಕರ ಗುಡಿ

ಕೋದಂಡರಾಮನ ಗುಡಿಯ ಎಡಬದಿಗೆ ತುಸು ಎತ್ತರದ ಮೇಲೆ ಶ್ರೀ ವ್ಯಾಸರಾಯ ಶ್ರೀಗಳವರಿಂದ ಸ್ಥಾಪಿತವಾದ್ದ ಈ ಪ್ರತಿಮೆಯು ಇದೆ. ಒಂದು ಹನುಮಂತದೇವರ ಗುಡಿಯು ಯಂತ್ರದ ಮಧ್ಯೆ ಮಾರುತಿ ಕುಳಿತಿರುವದರಿಂದ ಯಂತ್ರಸಿದ್ಧಿಗೆ ಪ್ರಸಿದ್ಧ ಗುಡಿ. ದಿನ ನಿತ್ಯ ಪೂಜೆ ನಡೆಯುತ್ತದೆ. ವ್ಯಾಸ ರಾಯರು ಶ್ರೀ ಕೃಷ್ಣದೇವರಾಯನಿಗೆ ಕುಷ್ಠರೋಗ ಬಂದಾಗ ಇಲ್ಲಿ ತಪಸ್ಸಿಗೆ ಕುಳಿತು ರಾಜನ ರೋಗವನ್ನು ನಿವಾರಣೆ ಮಾಡಿದರೆಂದು ಐತಿಹಾಸಿಕ ಸಂಗತಿಯು.

## ವರಾಹನ ಗುಡಿ

ಕೊದಂಡರಾಮನ ಗುಡಿಯಿಂದ ಸು. ೧೨೦ ಅಡಿ ಅಂತರದಲ್ಲಿ ವರಾಹನ ಗುಡಿ ಇದೆ. ಈಗ ಇದು ಹಾಳಾಗಿರುತ್ತದೆ. ವಿಜಯನಗರ ಸಾಮ್ರಾಜ್ಯದ "ವರಾಹ ಲಾಂಛನ"ವನ್ನು ನೋಡಬಹುದು. ವರಾಹ ಅಂದರೆ ಹಂದಿ. ಶ್ರೀ ವಿಷ್ಣುವು ವರಾಹ ಅವತಾರ ತಾಳಿ ತನ್ನ ಕೋರೆಯಿಂದ ಇಡೀ ಪೃಥ್ವಿಯನ್ನು ಎತ್ತಿಹಿಡಿದ ಚಿತ್ರವಿರುತ್ತದೆ.

## ಅನಂತಶಯನ ಗುಡಿ

ವರಾಹನ ಗುಡಿಯ ಪಕ್ಕದಲ್ಲಿಅನಂತಶಯನ ಚಿಕ್ಕಗುಡಿ ಇರುತ್ತದೆ. ಆರಡಿ ಎತ್ತರವಾದ ವಿಗ್ರಹವಿರುತ್ತದೆ:

## ಸೂಳೆ ಬಜಾರ (ಅಚ್ಯುತ ಪೇಟೆ)

ವರಾಹನ ಗುಡಿಯ ದಕ್ಷಿಣ ಭಾಗದಲ್ಲಿದೆ. ಎಡಬಲಗಳಲ್ಲಿ ಕಲ್ಲಿನ ಕಟ್ಟಡಗಳಿರುತ್ತವೆ. ಇದು ಆಗಿನ ಕಾಲದಲ್ಲಿ ವೇಶ್ಯೆಯರ ನರ್ತನ ಪೇಟೆಯಾಗಿತ್ತು ಅಚ್ಯುತರಾಯನು ಅತಿ ಕಾಮಿಯಾಗಿದ್ದರಿಂದ ವೇಶ್ಯೆಯರ ಸಹವಾಸದಲ್ಲಿ ಕಾಲ ಕಳೆಯುತ್ತಿದ್ದರಿಂದ ಆ ಸ್ಥಳಕ್ಕೆ ಅಚ್ಯುತ ಪೇಟೆ ಎನ್ನುತ್ತಾರೆ.

## ವ್ಯಾಸರಾಯರ ಮಠ

ವರಾಹನ ಗುಡಿಯ ಮುಂದೆ ಸಾಗಿದರೆ ಬಲಗಡೆಗೆ ಗುಡ್ಡದ ಮೇಲೆ ಈ ಮಠ ಇರುತ್ತದೆ. ಮಠದಲ್ಲಿ ಯಾರೂಇರುವದಿಲ್ಲ. ಎದುರಿಗೆ ಒಂದು ಮಹಾಸತಿ ಕಲ್ಲು ಇದೆ. ಇದಕ್ಕೆ ಜೈನರ ಗುಡಿ ಎಂದೂ ಕರೆಯುತ್ತಾರೆ.

## ಮಾಸತಿಕಲ್ಲು

ಈ ಕಲ್ಲುಗಳನ್ನು ಉದ್ದಾನ ವೀರಭದ್ರನ ಗುಡಿಯ ಅಂಗಳದಲ್ಲಿ ವಿಪುಲವಾಗಿ ಕಾಣಬಹುದು. ಒಂದು ಮಹಾಸತಿ ಕಲ್ಲು ಸೀತಾಸರೋವರಕ್ಕೆ ಹೋಗುವ ಮಾರ್ಗದಲ್ಲಿದೆ. ಇದರಲ್ಲಿ ಒಂದು ಗಜ ಚಿತ್ರ ಕೆತ್ತಿದ್ದು ಈರ್ವರು ಸ್ತ್ರೀಯರ ಚಿತ್ರವಿದೆ. ಓರ್ವಳು ಆನೆಯ ಮುಂದೆ ನಿಂತು ತನ್ನ ಬಲಗೈಯನ್ನು ಎತ್ತಿ ಹಿಡಿದಿದ್ದಾಳೆ. ಅಂದರೆ ಸಹಗಮನ ಮಾಡುವ ದೃಶ್ಯ. ಪತಿಯ ನಿಧನದ ನಂತರ ಸತಿ ಹಿಂಬಾಲಿಸುವ ದೃಶ್ಯ ಇರುತ್ತದೆ.

## ಸೀತೆಯ ಸೆರಗು

ವ್ಯಾಸರಾಯರ ಮಠದ ಹತ್ತಿರ ಒಂದು ಬಂಡೆಗಲ್ಲಿನಲ್ಲಿ ಬಿಳಿಕಲ್ಲಿನಪಡಿಯು ಹೊರಟು ಬದಿಗಿರುವ ಸುಗ್ರೀವನ ಗವಿಯ ವರೆಗೆ ಹೋಗಿದೆ. ಇದೇ ಸೀತೆಯ ಸೆರಗು.

## ಸುಗ್ರೀವನ ಗವಿ

ಸೀತೆಯ ಸೆರಗಿನ ಹತ್ತಿರ ಬಂಡೆಗಳ ಮಧ್ಯ ಇರುವ ದೊಡ್ಡ ಗವಿಗೆ ಸುಗ್ರೀವನ ಗುಹೆ ಎನ್ನುತ್ತಾರೆ. ಅದು ಸುಗ್ರೀವನ ವಾಸಸ್ಥಳ. ಈ ಗುಹೆಯಲ್ಲಿ ರಾಮ-ಲಕ್ಷ್ಮಣ-ಸೀತೆಯರ ವಿಗ್ರಹಗಳನ್ನು ನಾವು ಕಾಣಬಹುದು.

## ಸೀತಾ ಸರೋವರ

ಸುಗ್ರೀವನ ಗುಹೆಯ ಹತ್ತಿರ ಈ ಸರೋವರ ಅದೆ. ಕಲ್ಲಿನ ಹಾಸಿಗೆಯ ಇಳಿಜಾರಿನ ತುದಿಯಲ್ಲಿ ಒಂದು ನೀರಿನ ಗುಂಡಿ ಇದೆ. ಇಲ್ಲಿ ಸ್ನಾನ ಮಾಡಿದ ಸ್ತ್ರೀಯರಿಗೆ ಅನಂತಕಾಲ ಸೌಭಾಗ್ಯ ದೊರಕುವದೆಂದು ವಾಡಿಕೆಯ ಪ್ರಕಾರ ಹೇಳುತ್ತಾರೆ.

## ಅರಸರ ತುಲಾಭಾರ ಚೌಕಟ್ಟು

ಈ ತುಲಾಭಾರ ಚೌಕಟ್ಟು ಹದಿನೈದು ಫೂಟು ಎತ್ತರದ ಎರಡು ಕಲ್ಲಿನ ಕಂಭಗಳ ಮೇಲೆ ಇದೆ. ಇದಕ್ಕೆ ಹನ್ನೆರಡು ಫೂಟು ಉದ್ದವಾದ ಕಲ್ಲಿನ ತೊಲೆ ಯನ್ನು ಅಡ್ಡವಾಗಿ ಇಟ್ಟಿದ್ದಾರೆ. ಈ ತೊಲೆಗೆ ಮೂರು ಬಳೆಗಳನ್ನು ಹಾಕಿದ್ದಾರೆ. ಈ ಬಳೆಗಳ ಆಧಾರದಿಂದ ತಕ್ಕಡಿಯನ್ನು ತೂಗುತ್ತಿದ್ದರು. ವಿಜಯ ನಗರದ ಅರಸರು ತಮ್ಮ ತೂಕಕ್ಕೆ ಸರಿಹೋಗುವ ಬಂಗಾರ, ಬೆಳ್ಳಿ, ರತ್ನ, ವಜ್ರ, ವೈಡೂರ್ಯಗಳನ್ನು ತೂಗಿಸಿ ಅವುಗಳನ್ನು ಜಂಗಮರಿಗೆ, ಬ್ರಹ್ಮಚಾರಿ ಗಳಿಗೆ, ಬಡವರಿಗೆ ದಾನ ಮಾಡುತ್ತಿದ್ದರು. ಅಲ್ಲದೇ ಅರಸುಮನೆತನದವರು ಕೆಲವೊಂದು ವಿಶೇಷ ಸಂಧರ್ಬಗಳಲ್ಲಿ ಇಂತಹ ತುಲಾಭಾರ ಮಾಡುತ್ತಿದ್ದರು.

## ಕಲ್ಲಿನ ತೇರು

ಒಂದೇ ಒಂದು ಅಖಂಡವಾದ ಬಂಡೆಗಲ್ಲಿನಲ್ಲಿ ಈ ತೇರನ್ನು ಕಟೆದಿದ್ದಾರೆ ಇದರ ಎತ್ತರ ಇಪ್ಪತ್ತಾರು ಅಡಿ. ತೇರಿನ ತುಂಬ ಶಿಲಾವಿಗ್ರಹಗಳು ಶಿಲ್ಪಕಲೆ ಗಳು ಇರುತ್ತವೆ. ಕಲ್ಲಿನ ತೇರು ಕಲೆಯ ಸೆಲೆಯಾಗಿದೆ.

## ವಿಜಯ ವಿಠ್ಠಲನ ಗುಡಿ

ಇದು ಹಂಪೆಯ ದೇಗುಲಗಳಲ್ಲಿಯೇ ಅತ್ಯಂತ ಸರ್ವೋತ್ತಮವಾದ ಗುಡಿಯು. ಅಂದು ಕಟ್ಟಿಸಿದ ಗುಡಿಯು ಇಂದಿಗೂ ಅಚ್ಚಳಿಯದೇ ಹಾಗೆ ನಿಂತಿದೆ. ಶ್ರೀ ಕೃಷ್ಣದೇವರಾಯನು ಈ ಗುಡಿಯನ್ನು ಹಜಾರರಾಮನ ಗುಡಿಯ ಜೊತೆಗೆ ೧೫೧೩ ರಲ್ಲಿ ಕಟ್ಟಲು ಪ್ರಾರಂಭಿಸಿದನು. ಪಾವಟಿಗೆಯ ಎಡ-ಬಲಕ್ಕಿರುವ ಸುಂದರವಾದ ಆನೆಗಳು ಭಗ್ನವಾಗಿವೆ. ಗುಡಿಯ ರಂಗ ಮಂಟಪವು ದೊಡ್ಡದಿರುತ್ತದೆ. ಅಲ್ಲಿ ಒಂದೇ ಕಲ್ಲನ್ನು ಕೊರೆದು ಏಳು ಉಪ ಸ್ತಂಭಗಳನ್ನು ಮಾಡಿದ್ದಾರೆ. ಆ ಏಳೂ ಕಂಬಗಳನ್ನು ಬಾರಿಸಿದರೆ ಅವು ಸಂಗೀತದ ಸಪ್ತಸ್ವರಗಳನ್ನು ಹೊರಹೊಮ್ಮಿಸುತ್ತವೆ. ಇದು ಶಿಲ್ಪಿಯ ಕುಶಲತೆ ಯನ್ನು ಎತ್ತಿತೋರಿಸುತ್ತದೆ. ರಂಗಮಂಟಪದ ಮಾಳಿಗೆ ಬಿದ್ದಿದೆ. ಗರ್ಭ ಗೃಹದ ಸುತ್ತಲೂ ತಗ್ಗಿನಲ್ಲಿ ಪ್ರದಕ್ಷಿಣೆಗಾಗಿ ಪ್ರಾಕಾಶವಿದೆ. ಈ ಪ್ರಾಕಾರಕೆ ಮಾಳಿಗೆ ಉಂಟು. ಗುಡಿಯ ಎದುರಿಗೆ ಕಲ್ಲಿನ ತೇರು ಇರುತ್ತದೆ. ಪಟಾಂಗ ಣದಲ್ಲಿದ್ದ ಕಲ್ಯಾಣ ಮಂಟಪನು ಒಳ್ಳೇ ಸ್ಥಿತಿಯಲ್ಲಿದೆ ಅಲ್ಲಿಯ ಕೆತ್ತನೆಯ ಕೆಲಸವು ಮನೋಲ್ಲಾಸಕರವಾಗಿರುತ್ತದೆ. ನಾನಾತರಹದ ಪ್ರಾಣಿಗಳ ಚಿತ್ರ ವನ್ನು ಅದರಲ್ಲಿ ಕೆತ್ತಿದ್ದಾರೆ. ಆದರೆ ಈ ದೇವಾಲಯದಲ್ಲಿ ವಿಠ್ಠಲ ದೇವರು ಇರುವದಿಲ್ಲ. ಅದೊಂದೇ ಕೊರತೆ ಆ ದೇವಾಲಯದಲ್ಲಿದೆ.

## ವಿಠಲನ ಪೇಟೆ

ವಿಜಯ ವಿಠ್ಠಲ ಗುಡಿಯ ಎದುರಿಗೆ ಒಂದು ರಾಜಮಾರ್ಗವಿರುತ್ತದೆ. ಅದರ ಎರಡೂ ಬದಿಗೆ ಹಾಳು ಕಟ್ಟಡಗಳ ಅವಶೇಷಗಳು ಇರುತ್ತವೆ. ಅರ್ಧ ಮೈಲು ಉದ್ದವಿರುವ ಈ ರಾಜಮಾರ್ಗದ ಕೊನೆಗೆ ಒಂದು ಕಲ್ಲಿನ ಮಂಟಪ ವಿರುತ್ತದೆ. ಮುಂದೆ ಇದೇ ದಾರಿಯಿಂದ ಒಂದೆರಡು ಫರ್ಲಾಂಗ ದಾರಿ ಸಾಗಲು ಆನೇಗುಂದಿಗೆ ಸಾಗುವ ಮಾರ್ಗವು ಎಡಕ್ಕೆ ಒಡೆಯುತ್ತದೆ. ಬಲ ಗಡೆಯ ದಾರಿಯು ಕಮಲಾಪುರಕ್ಕೆ ಹೋಗುತ್ತದೆ ಎಡಗಡೆಯ ದಾರಿಯನು ಹಿಡಿದು ಅರ್ಧಮೈಲು ಗುಡ್ಡದ ಮೇಲೆ ತುಂಗಭದ್ರಾ ನದಿಯ ದಂಡೆಗೆ ತಲುಪು ವೆವು. ನದಿಯ ಆಚೆಯ ದಡಕ್ಕೆ ಆನೆಗುಂತಿಯ ಭದ್ರವಾದ ಕೋಟೆ ಕೊತ್ತಳ ಮಹಾದ್ವಾರಗಳು ಸಿಗುತ್ತವೆ. ಅವುಗಳ ಒಳಗೆ ಹಾಳಾದ ಕಟ್ಟಡಗಳು ಇರು ತ್ತವೆ. ಅರ್ಧ ಮೈಲಿನ ನಂತರ ಆನೇಗುಂದಿಯು ಸಿಗುತ್ತದೆ.

# ಆನೆಗುಂದಿ

ಆನೆಗುಂದಿ ಊರು ಚಿಕ್ಕದಿರುತ್ತದೆ. ಇಲ್ಲಿ ಪುರಾತನ ಅರಮನೆಯು ಗಗನ ಮಹಲಿನ ಅವಶೇಷಗಳು ಇರುತ್ತವೆ. ಈ ಚಿಕ್ಕ ಸಂಸ್ಥಾನವು ಹೈದರಾಬಾದದ ನಿಜಾಮನ ಆಡಳಿತಕ್ಕೆ ಒಳಗೊಂಡಿರುತ್ತದೆ. ಊರಲ್ಲಿ ಕಚೇರಿ ಹಳೆಯ ಅರಮನೆ ಗಗನ ಮಹಲು ಹೊಸ ಅರಮನೆಗಳು ಇರುತ್ತವೆ. ಮುಂದೆ ಗಂಗಾವತಿಯ ದಾರಿಯ ಮೇಲಿರುವ ಮಹಾದ್ವಾರವನ್ನು ದಾಟಿ ಎಡಗಡೆಗೆ ಕೋಟಿಯಗುಂಟ ಸಾಗುವ ದಾರಿಯು ಗವಿರಂಗನಾಥನ ಗುಡಿ ಹಾಗೂ ಪಂಪಾ ಸರೋವರಗಳಿಗೆ ಹೋಗುತ್ತದೆ. ಮಾರ್ಗದಲ್ಲಿ ಎಡಬದಿಗೆ ಒಂದು ದೊಡ್ಡ ಮಹಾದ್ವಾರ ಇರುತ್ತದೆ. ಮುಂದೆ ತುಸು ಅಂತರದಲ್ಲಿ ಎಡಬದಿಯ ಗುಡ್ಡದ ಮೇಲೆ ಗವಿರಂಗನಾಥನ ಚಿಕ್ಕಗುಡಿ ಇರುತ್ತದೆ. ಗುಡ್ಡದ ತುದಿಗೆ ಕೋಟೆಯ ಗುಡಿಯೂ ಇರುತ್ತದೆ. ಆ ಕೋಟೆಯ ಗುಡಿಯನ್ನು ದಾಟಿದರೆ ಆಂಜನೆಯ ಬೆಟ್ಟ ಕಾಣುತ್ತದೆ. ಬಲಗಡೆಗೆ ಸಿಗುವ ದಾರಿಗಳನ್ನು ಬಿಟ್ಟು ಎಡಗಡೆಗೆ ಅರ್ಧ ಮೈಲು ಸಾಗಿದರೆ ಒಂದು ಕಾಲುವೆಯು ಸಿಗುತ್ತದೆ. ಇದೇ ಕಾಲುವೆಯ ಮೇಲುಗಡೆಗೆ ೬–೭ ಅಡಿ ಎತ್ತರದ ಮತ್ತೊಂದು ಕಲ್ಲುಗಚ್ಚಿನಿಂದ ಕಟ್ಟಿದ ಕಾಲುವೆಯಲ್ಲಿ ಸಹ ನೀರು ಹರಿಯುತ್ತದೆ. ಇವುಗಳನ್ನು ದಾಟಿದರೆ ಪುರಾಣ ಪ್ರಸಿದ್ಧವಾದ ಪಂಪಾಸರೋವರ ಅದರ ದಂಡೆಯ ಮೇಲೆ ಒಂದು ಚಿಕ್ಕಗುಡಿ ಅದರ ಹಿಂದೆ ಶಬರಿಸ್ಥಾನ ಸಿಗುವವು. ರಾಮಾಯಣದಲ್ಲಿ ಬರುವ ಕಿಷ್ಕಿಂಧೆ ಇದೇ ಆನೆಗುಂದಿಯಾಗಿತ್ತೆಂದು ಇತಿಹಾಸಕಾರರು ಹೇಳುತ್ತಾರೆ. ವಾನರಪತಿ ಸುಗ್ರೀವನ ರಾಜಧಾನಿಯಾಗಿತ್ತೆಂದು ಹೇಳುತ್ತಾರೆ. ೧೯೪೮ರ ವರೆಗೆ ಇದೊಂದು ಚಿಕ್ಕ ಸಂಸ್ಥಾನವಾಗಿತ್ತು. ವಿಜಯನಗರ ಸಾಮ್ರಾಜ್ಯದ ಅತ್ಯಂತ ವೈಭವದ ಕಾಲದಲ್ಲಿ ಇದು ಹಂಪೆಯ ಉತ್ತರ ದಿಕ್ಕಿನ ಗಡಿಯಾಗಿತ್ತೆಂದು ಇತಿಹಾಸಕಾರರು ಹೇಳುತ್ತಾರೆ.

# ಆನೆಗುಂದಿಯಲ್ಲಿ ನೋಡುವ ಸ್ಥಳಗಳು

## ವಾಲಿಕಾಷ್ಟ

ಹಪಗೋಳಿನಿಂದ ನದಿ ತಟಾಕದ ಬಳಿ ಬಹಳ ದುರ್ಗಮವಾದ ದಾರಿಯಿಂದ ನಿಂಬಾಪುರದ ಹದ್ದಿಯಲ್ಲಿರುವ ವಾಲಿಕಾಷ್ಟಕ್ಕೆ ಬರಬೇಕು. ವಾಲಿಕಾಷ್ಟ ಅಂದರೆ ಎತ್ತರವಾದ ದಿನ್ನೆ. ಇಲ್ಲಿ ವಾಲಿಯನ್ನು ದಹನ ಮಾಡಿದ್ದರೆಂದು ಹೇಳುತ್ತಾರೆ. ಆದರೆ ಇದನ್ನು ಕೆಲವರು ವಿಜಯನಗರದ ಅರಸರ ಕಾಲದಲ್ಲಿ ಸಹಗಮನದ ಪವಿತ್ರ ಸ್ಥಳವಾಗಿತ್ತು .ಎಂದು ಹೇಳುತ್ತಾರೆ.

## ಕಪಿಲಾಶ್ರಮ

ಇದು ವಾಲಿಕಾಷ್ಟದಿಂದೀಚೆಗೆ ಇರುತ್ತದೆ. ಇದು ಕಪಿಲ ಮಹರ್ಷಿಗಳ ಆಶ್ರಮ. ಅವರು ಇಲ್ಲಿ ತಪಸ್ಸನ್ನು ಮಾಡಿದ್ದರೆಂದು ಹೇಳುತ್ತಾರೆ.

## ಹುಚ್ಚಪ್ಪಯ್ಯನ ಮಂಟಪ

ಹಂಪೆಯಿಂದ ಆನೆಗುಂದಿಯ ಮಾರ್ಗ ಮಧ್ಯೆ ಇರುವ ಜಲಮಾರ್ಗಕ್ಕೆ ತಳವಾರ ಘಾಟ್ಟ ಎಂದೆನ್ನುತ್ತಾರೆ. ಅದನ್ನು ದಾಟಿದ ಬಳಿಕ ಊರೊಳಗೆ ಹೋಗಬೇಕಾದ ಒಂದು ಕಿ. ಮಿ. ಮಾರ್ಗದಲ್ಲಿ ಒಂದು ಹೊಲದ ಮಧ್ಯ ಒಂದು ಮಂಟಪ ಕಾಣುತ್ತದೆ. ಇದು ಕರಿಯ ಕಲ್ಲಿನ ಕಂಭಗಳು ಚಾಲುಕ್ಯ ಶಿಲ್ಪ ಕಲೆಯ ಮಾದರಿಯಲ್ಲಿರುತ್ತದೆ. ಇದೇ ಹುಚ್ಚಪ್ಪಯ್ಯನ ಮಂಟಪ.

ಆನೆಗುಂದಿಯ ಆಗ್ನೆಯ ಮೂಲೆಯಲ್ಲಿ ಚಿಂತಾಮಣಿ ಮೂಲಮಠ, ಮುಕ್ತಿ. ನರಸಿಂಹಸ್ವಾಮಿಯ ಗುಡಿ, ತ್ರಿಪುರಸುಂದರಿ ಮಂದಿರ, ರಾಮಬಾಣ, ತಾರಾಪರ್ವತ, ನವವೃಂದಾವನ, ಗಗನಮಹಲ, ರಂಗನಾಥನ ಗುಡಿ ಮುಂತಾದ ಪುರಾತನ ಸ್ಮಾರಕಗಳು ಇರುತ್ತವೆ.

ತ್ರಿಪುರ ಸುಂದರಿ ಅಥವಾ ಮಹಿಷಾಸುರ ಮರ್ದಿನಿ ಗುಡಿಯು ಚಿಂತಾಮಣಿ ಮೂಲಮಠದ ಹೊರಭಾಗದಲ್ಲಿದೆ.

ರಾಮಬಾಣ ಇದೊಂದು ಗುಡಿಕಲ್ಲು. ಎತ್ತರವಾಗಿದ್ದು ವಿಶಾಲವಾಗಿರುತ್ತದೆ. ಈ ಗುಡಿಯ ಹಿಂದೆ ನಿಂತು ಶ್ರೀ ರಾಮಚಂದ್ರನು ವಾಲಿಯನ್ನು ಬಾಣದಿಂದ ಹೊಡೆದು ಕೊಂದನೆಂದು ಹೇಳುತ್ತಾರೆ.

# ನವವೃಂದಾವನ

ಆನೆಗುಂದಿಯ ಪೂರ್ವಕ್ಕೆ ಸುಮಾರು ಅರ್ಧಮೈಲು ಕ್ರಮಿಸಿದ ನಂತರ ನದಿಯು ಎರಡು ಟಿಸಳಾಗಿದ್ದು ಮಧ್ಯದಲ್ಲಿರುವ ನಡುಗಡ್ಡೆಯ ಮೇಲೆ ಮಾಧ್ವರಿಗೆ ಪವಿತ್ರವಾದ ನವವೃಂದಾವನಗಳಿರುತ್ತವೆ. ಮಳೆಗಾಲದಲ್ಲಿ ಇಲ್ಲಿಗೆ ಹೋಗಲು ಅಶಕ್ಯ- ಈ ನಡುಗಡ್ಡೆಯಲ್ಲಿ ನವಯತಿಗಳ ವೃಂದಾವನ ಸಮೂಹ ವಿದೆ. ಹರಗೋಲಿನಿಂದ ಈ ನಡುಗಡ್ಡೆಗೆ ಬರಬೇಕಾಗುತ್ತದೆ

## ನವವೃಂದಾವನದಲ್ಲಿ ನಿರ್ಯಾಣಹೊಂದಿದ ಯತಿಗಳ ಹೆಸರುಗಳು

| ಯತಿಗಳು | ವೃಂದಾವನಸ್ಥರಾದದ್ದು |
|---|---|
| ಪದ್ಮನಾಭ ತೀರ್ಥರು | ಕ್ರಿಶ. ೧೩೨೪ |
| ರವೀಂದ್ರ ತೀರ್ಥರು | ೧೩೯೦ |
| ವಾಗೀಶ ತೀರ್ಥರು | ೧೪೦೮ |
| ವ್ಯಾಸರಾಯ ತೀರ್ಥರು | ೧೫೩೯ |
| ರಘುವರ್ಯ ತೀರ್ಥರು | ೧೫೪೮ |
| ಸುಧೀಂದ್ರ ತೀರ್ಥರು | ೧೬೨೪ |
| ಶ್ರೀನಿವಾಸ ತೀರ್ಥರು | ? |
| ರಾಮತೀರ್ಥರು | ? |
| ಗೋವಿಂದ ತೀರ್ಥರು | ? |

# ಕಾಲಕೂಟಾದ್ರಿ

ತುಂಗಭದ್ರಾ ನದಿಯ ಮಧ್ಯದಲ್ಲಿರುವ ನಡುಗಡ್ಡೆಯಲ್ಲಿಯೇ ಒಂದು ದಿನ್ನೆ ಇರುತ್ತದೆ. ಇದಕ್ಕೆ ಕಾಲಕೂಟಾದ್ರಿ ಎನ್ನುತ್ತಾರೆ ಇದರ ಬಳಿ ತುಂಗಭದ್ರೆಯು ದ್ವಿಮುಖವಾಗಿ ಹರಿಯುತ್ತಾಳೆ: ಎಡಭಾಗಕ್ಕೆ ಹರಿಯುವ ನದಿ ಮುಖದ ಪ್ರವಾಹಕ್ಕೆ ಪುಣ್ಯಕೋಟಿ ತೀರ್ಥ ಎಂದೆನ್ನುತ್ತಾರೆ.

## ಪಂಪಾಸರೋವರ

ಆನೆಗುಂದಿಯಿಂದ ಸುಮಾರು ಒಂದು ಮೈಲಿನ ನಂತರ ಈ ಸರೋವರ ಇರುತ್ತದೆ. ಇದರ ದಂಡೆಯಲ್ಲಿ ವಿಜಯಲಕ್ಷ್ಮಿಗುಡಿ ಇರುತ್ತದೆ. ಮತ್ತು ಅದರ ಹತ್ತಿರ ಈಶ್ವರ ಲಿಂಗದ ಗುಡಿ, ಹನುಮಂತನ ಗುಡಿ ಗಣೇಶನ ಗುಡಿ, ಮುಂ. ಗುಡಿಗಳಿರುತ್ತವೆ. ವಿದ್ಯಾರಣ್ಯರ ಶಿಲಾವಿಗ್ರಹವೂ ಇಲ್ಲಿಯೇ ಇರುತ್ತದೆ. ಪುರಾಣದ ಪ್ರಕಾರ ಪಂಪಾದೇವಿಯು ಬ್ರಹ್ಮನ ಮಗಳು. ಅವಳು ಶಿವನ ಸಲುವಾಗಿ ತಪಸ್ಸನ್ನು ಮಾಡಿದಳು. ಈ ಸರೋವರದಲ್ಲಿ ಪ್ರತಿದಿನ ಸ್ನಾನ ಮಾಡುತ್ತಿದ್ದಳು. ಅದಕ್ಕೆ ಮೆಟ್ಟಲುಗಳು ಇರುತ್ತವೆ

## ಗಣೇಶನ ಗುಡಿ

ಆನೆಗುಂದಿಯಲ್ಲಿ ಅತಿ ಸುಂದರವಾದ ಗುಡಿ. ಗಣೇಶನ ವಿಗ್ರಹವನ್ನು ಕರಿಯ ಕಲ್ಲಿನಲ್ಲಿ ರಚಿಸಿದ್ದಾರೆ. ಮಂದಿರದ ಬಾಗಿಲದ ಮೇಲೆ ಕೆತ್ತನೆ ಕೆಲಸವು ಸುಂದರವಾಗಿರುತ್ತದೆ.

## ವಾಲೀಭಂಡಾರ

ಅಲ್ಲಿಂದ ಮುಂದೆ ಬಂದರೆ ೨೦ ಫೂಟು ಎತ್ತರದಲ್ಲಿಯ ಕಲ್ಲುಬಂಡೆಯ ಮೇಲೆ ವಾನರ ಚಿತ್ರಗಳನ್ನು ನಾವು ಕಾಣಬಹುದು. ಈ ಚಿತ್ರಗಳು ಅಷ್ಟೊಂದು ಸ್ಪಷ್ಟವಾಗಿ ಕಾಣುವದಿಲ್ಲ.

## ತಾರಾ ಪರ್ವತ

ಪೌರಾಣಿಕ ಗ್ರಂಥದ ಆಧಾರದ ಮೇರೆಗೆ ಶಿವಭಕ್ತನಾದ ದೇವಗುರು ತನ್ನ ಪತ್ನಿ ತಾರಾಳೊಡನೆ ಸಾವಿರ ವರುಷ ವಾಸವಾಗಿದ್ದನೆಂದು ಹೇಳುತ್ತಾರೆ. ಆದರೆ ರಾಮಾಯಣದ ಪ್ರಕಾರ ರಾಮನು ವಾಲಿಯನ್ನು ಸಂಹರಿಸಿದ ನಂತರ ಸುಗ್ರೀವನು ತಾರಾಳೊಡನೆ ಸುಖ-ವಿಲಾಸದೊಂದಿಗೆ ಈ ಸ್ಥಳದಲ್ಲಿ ಕಳೆದ ನೆಂಬ ಪ್ರತೀತಿ ಇದೆ.

## ಅಂಜನಾದ್ರಿ

ಪಂಪಾಸರೋವರದ ದಕ್ಷಿಣ ದಿಕ್ಕಿನಲ್ಲಿ ಹನುಮನಿಗೆ ಜನ್ಮವಿತ್ತ ಅಂಜ

ನಾದೇವಿಯ ಗುಡಿ ಇರುತ್ತದೆ. ಈ ಬೆಟ್ಟವನ್ನೇರಲು ಕಡಿದಾದ ದಾರಿ ಇರುತ್ತದೆ. ಈ ಅಂಜನಾದ್ರಿಯ ಎದುರಿಗೆ ಹನುಮಂತರಾಯನ ಗುಡಿ ಇರುತ್ತದೆ.

## ಮಧುವನ

ಇದು ಸುಗ್ರೀವನ ವನ. ಹನುಮಂತನು ಶ್ರೀ ರಾಮನಿಗೆ ಸೀತೆಯ ಗುರುತನ್ನು ತಂದು ತೋರಿಸಿದ್ದು ಈ ವನದಲ್ಲಿಯೇ. ಇದೇ ವನದಲ್ಲಿ ಶ್ರೀ ರಾಮನು ವಾಸವಾಗಿದ್ದನು.

## ಮಾನ ಸರೋವರ

ಪಂಪಾಸರೋವರದ ಮುಂದೆ ತುಸು ದೂರ ಕ್ರಮಿಸಿದ ನಂತರ ಎಡಕ್ಕೆ ಚಿಕ್ಕ ಸರೋವರ ಇದೆ. ಇದೇ ಮಾನಸರೋವರ. ಪಾರ್ವತಿಯು ಈ ನದಿಯಲ್ಲಿ ಸ್ನಾನ ಮಾಡಿದ ನಂತರ ತನ್ನ ಉತ್ಕಮನದಿಂದ ಗಣಪತಿಯನ್ನು ಮಗನನ್ನಾಗಿ ಪಡೆದಳೆಂದು ಹೇಳುತ್ತಾರೆ. ಆದರ ಹತ್ತಿರ ಪಾರ್ವತಿಯ ಗುಡಿ ಇದೆ. ಈ ಸರೋವರದ ಸುತ್ತಲೂ ಭಯಂಕರ ಅರಣ್ಯ ಬೆಳೆದಿರುತ್ತದೆ.

## ರಂಗನಾಥ ಗವಿ

ಪಂಪಾಸರೋವರದಿಂದ ಅರ್ಧಮೈಲು ಮುಂದೆ ಹೋದರೆ ಎಡಕ್ಕೆ ಬಂಡೆಗಲ್ಲಿನ ಗುಡ್ಡವಿರುತ್ತದೆ. ಇದರ ಮಧ್ಯದಲ್ಲಿ ರಂಗನಾಥನ ಗುಡಿ ಇರುತ್ತದೆ. ಈ ಗುಡಿಯು ಮಂಟಪದ ನಡುವೆ ಇರುವದು. ಈ ಮಂಟಪವು ನೆಲದಿಂದ ೨೦' ಎತ್ತರದಲ್ಲಿ ಇರುತ್ತದೆ. ಅಲ್ಲಿ ಒಂದು ಗವಿ ಇದೆ. ಆ ಗವಿಯಲ್ಲಿ ಬಗ್ಗಿ ಹೋದರೆ ಅಲ್ಲಿ ವೆಂಕಟೇಶ್ವರ ಮತ್ತು ಹನುಮಂತನ ವಿಗ್ರಹಗಳು ಇರುತ್ತವೆ. ಅಲ್ಲದೇ ವಿಷ್ಣು ಮತ್ತು ವೇಣುಗೋಪಾಲ ಪ್ರತಿಮೆಗಳು ಇರುತ್ತವೆ

## ಕಾವಲು ಗೋಪುರ

ಗವಿ ರಂಗನಾಥನ ಗುಡ್ಡದ ಮೇಲೆ ಒಂದು ಕೋಟೆ ಇರುತ್ತದೆ. ಇದು ನೆಲದಿಂದ ೨೦೦' ಎತ್ತರದಲ್ಲಿರುತ್ತದೆ. ಈಗಲೂ ಇದರ ಗೋಡೆಗಳು ಭದ್ರವಾಗಿರುತ್ತವೆ. ಮುಂದೆ ಇಲ್ಲಿ ಕಾವಲು ಗೋಪುರ ಇರುತ್ತದೆ. ಆದರ ಮೇಲೇರಿ ನೋಡಲು ಆನೆಗುಂದಿಯ ವಿಹಂಗಮ ನೋಟ ಕಾಣುತ್ತದೆ.

# ಶ್ರೀ ಕೃಷ್ಣದೇವರಾಯನ ಸಮಾಧಿ

ಆನೆಗುಂದಿಯ ಪೂರ್ವದಿಕ್ಕಿಗೆ ಒಂದು ಕಲ್ಲಿನ ಕೋಟೆಯ ಬಾಗಿಲು ಇರುತ್ತದೆ ಈ ಬಾಗಿಲಿನಿಂದ ಒಂದು ದಾರಿ ಹೋಗುತ್ತದೆ. ಅದರ ಮಧ್ಯದಲ್ಲಿ ೬೪ಕಂಭಗಳ ಒಂದು ಹಳೆಯ ಮಂಟಪವಿರುತ್ತದೆ. ಈ ಮಂಟಪವು ಶ್ರೀ ಕೃಷ್ಣದೇವರಾಯರ ಸಮಾಧಿಯಾಗಿರುತ್ತದೆ.

## ಶಂಭುನಾಥನ ಗವಿ

ತುಂಗಭದ್ರೆಯ ಕಾಲುವೆ ದಂಡೆಯ ಮೇಲೆ ಶಂಭುನಾಥನ ಗವಿ ಇರುತ್ತದೆ. ಇದು ಬಹಳ ಪ್ರಶಾಂತ ಪ್ರದೇಶ ಪ್ರಕೃತಿಯ ವಾತಾವರಣ ಮನಕ್ಕೆ ಆಹ್ಲಾದಕರವಾಗಿರುತ್ತದೆ. ಪಾವನ ಪ್ರದೇಶವು. ಈ ಸ್ಥಳದಲ್ಲಿ ಓರ್ವ ಧನಿಕ ಬ್ರಾಹ್ಮಣನು ಒಂದು ವಸತಿ ನಿರ್ಮಾಣ ಮಾಡಿದ್ದಾನೆ. ಎರಡಂತಸ್ತಿನ ಈ ಕಟ್ಟಡದಲ್ಲಿ ಎರಡನೇ ಅಂತಸ್ತಿನಲ್ಲಿ ಒಂದು ವಾಚನಾಲಯ ಇರುತ್ತದೆ. ಅಲ್ಲಿ ಯಾಗ-ಯಜ್ಞಗಳನ್ನು ಮಾಡುತ್ತಿರುತ್ತಾರೆ. ಒಂದು ವಿಭಾಗದಲ್ಲಿ ವಿಶ್ರಾಂತಿ ಧಾಮವಿದೆ. ಆದರ ಪಶ್ಚಿಮಕ್ಕೆ ಶಿವದೇವಾಲಯವಿದೆ. ಇಲ್ಲಿ ಒಂದು ಯಜ್ಞ ವೇದಿಕೆ ಇರುತ್ತದೆ.

## ತಿಮ್ಮಪ್ಪನ ಗುಡಿ

ಕಂಪಲಿ ರಸ್ತೆಯಲ್ಲಿರುವ ೯ನೇ ಮೈಲುಗಲ್ಲಿನ ನಂತರ ಎರಡನೇ ಫರ್ಲಾಂಗಿನ ಬಲಭಾಗದಲ್ಲಿ ಒಂದು ಕಾಲು ದಾರಿ ಗುಡ್ಡಕ್ಕೆ ಹೋಗುತ್ತದೆ. ಈ ಗುಡ್ಡದ ಮೇಲೆ ತಿಮ್ಮಪ್ಪನ ಗುಡಿ ಇದೆ. ಕತ್ತಲಿನ ಈ ಗವಿಯೊಳಗೆ ವೆಂಕಟೇಶ್ವರನ ರೇಖಾಚಿತ್ರವು ಒಡಮೂಡಿರುತ್ತದೆ.

ಈ ಪ್ರಕಾರವಾಗಿ ಆನೆಗುಂದಿಯಲ್ಲಿ ನೋಡಬೇಕಾದ ಸ್ಥಳಗಳು ಐತಿಹಾಸಿಕ ಪೌರಾಣಿಕ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ.

ಆನೆಗುಂದಿಯ ಸಂಸ್ಕೃತ ಹೆಸರು: ಕುಂಜರ ಕೋಣ "ಕುಂಜರ" ಅಂದರೆ ಆನೆ ಕೋನ ಅಂದರೆ ನಂದಿ. ಪಂಪಾನಗರಕ್ಕೆ ತಾಯಿ ಆನೆಗುಂದಿ. ವಿಜಯನಗರ ಸಾಮ್ರಾಜ್ಯ ಹಾಳಾದ ಮೇಲೆ ಈ ಚಿಕ್ಕ ಸಂಸ್ಥಾನವು ನಿಜಾಮರ ಕೈಸೇರಿತು. ನಂತರ ಬ್ರಿಟಿಷ ಸರಕಾರವು ವಿಜಯನಗರದ ವೈಭವ ಹಾಗೂ ರಾಜ ಗೌರವ

ವನ್ನು ಅರಿತು ಅವರಿಗೆ ಮಾಸಾಶನ ಕೊಡುತ್ತಿದ್ದರು. ಹೀಗೆ ಆನೆಗುಂದಿಯ ರಾಜಮನೆತನದವರು ಬ್ರಿಟಿಷರ ಆಳಿಕೆ ಭಾರತದಲ್ಲಿರುವವರೆಗೂ ಗೌರವಾನ್ವಿತ ರಾಗಿದ್ದರು. ನಂತರ ೧೯೪೭ರ ನಂತರ ಭಾರತೀಯ ಸಂಸ್ಥಾನಗಳೆಲ್ಲವು ಭಾರತದ ಏಕತ್ರ ಆಡಳಿತದಲ್ಲಿ ಒಳಗೊಂಡಿದ್ದರಿಂದ ಆನೆಗುಂದಿಯೂ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡಿತು.

## ಕೃಷ್ಣನ ಗುಡಿ

ಹೇಮಕೂಟದಿಂದ ಕಮಲಾಪುರಕ್ಕೆ ಹೊರಟು ಮೊದಲು ವಿಶಾಲವಾದ ಸುಂದರವಾದ ಕೃಷ್ಣನ ಗುಡಿಯು ಹತ್ತುವದು. ಇದು ೩೨೦ × ೨೦೦' ಪಟಾಂಗಣವಿರುತ್ತದೆ. ಇದನ್ನು ೧೫೧೩ರಲ್ಲಿ ಶ್ರೀ ಕೃಷ್ಣದೇವರಾಯನು ಕಟ್ಟಿಸಿದನು. ಅಲ್ಲಿದ್ದ ಶ್ರೀ ಕೃಷ್ಣನ ಸುಂದರ ಮೂರ್ತಿಯು ಕೃಷ್ಣದೇವರಾಯನಿಗೆ ಉದಯಗಿರಿಯ ವಿಜಯದಲ್ಲಿ ದೊರೆತದ್ದು. ಈ ಗುಡಿಯಲ್ಲಿ ಕೃಷ್ಣಾವತಾರದ ಕಥೆಗಳ ಕೆಲವು ದೃಶ್ಯಗಳ ಚಿತ್ರಗಳಿವೆ. ಗೋಪಿಕಾ ಸ್ತ್ರೀಯರು ಸರೋವರದಲ್ಲಿ ಸ್ನಾನಕ್ಕಿಳಿದ ಸಮಯದಲ್ಲಿ ಶ್ರೀ ಕೃಷ್ಣನು ಅವರ ಸೀರೆಗಳನ್ನು ತೆಗೆದುಕೊಂಡು ಗಿಡವನ್ನೇರಿ ಕುಳಿತ ದೃಶ್ಯವು ಇನ್ನೂ ಒಳ್ಳೇ ಸ್ಥಿತಿಯಲ್ಲಿದೆ. ಈ ಗುಡಿಯ ಮುಂದಿನ ತಗ್ಗಿನಲ್ಲಿ ಮಧ್ಯೆ ಸಾಲಾಗಿ ನಿಂತಿರುವ ಮಂಟಪಗಳು ಕೃಷ್ಣಪುರವೆಂದು ಪ್ರಸಿದ್ಧಿ ಪಡೆದಿತ್ತು. ಈಗ ಆ ಕೃಷ್ಣನ ವಿಗ್ರಹವನ್ನು ಮದ್ರಾಸದ ವಸ್ತುಸಂಗ್ರಹಾಲಯದಲ್ಲಿ ನಾವು ಕಾಣಬಹುದು

## ಉಗ್ರನರಸಿಂಹ

ಶ್ರೀ ಕೃಷ್ಣನ ಗುಡಿಯ ಹತ್ತಿರ ಒಂದೇ ಬಂಡೆಗಲ್ಲಿನಲ್ಲಿ ಸಿದ್ಧಪಡಿಸಿದ ಉಗ್ರನರಸಿಂಹನ ಸುಂದರ ಭವ್ಯವಾದ ಮೂರ್ತಿಯು ಇರುತ್ತದೆ. ಇದು ಇಪ್ಪತ್ತೆರಡು ಅಡಿ ಎತ್ತರ ಇರುತ್ತದೆ. ಏಕಶಿಲಾಪ್ರತಿಮೆ ಇರುತ್ತದೆ. ನಾಲ್ಕು ಶತಮಾನಗಳ ಹಿಂದಿನದು. ಶ್ರೀ ಕೃಷ್ಣದೇವರಾಯನು ೧೫೨೮ರಲ್ಲಿ ಆರ್ಯಕೃಷ್ಣಭಟ್ಟನಿಂದ ಪ್ರತಿಷ್ಠೆ ಮಾಡಿಸಿದನೆಂದು ಶಿಲಾಶಾಸನವು ಹೇಳುತ್ತದೆ. ಉಗ್ರನರಸಿಂಹನ ತೊಡೆಯ ಮೇಲೆ ಲಕ್ಷ್ಮಿ ವಿಗ್ರಹ ಇತ್ತೆಂದು ಕಂಡು ಬರುತ್ತದೆ. ಆದರೆ ಆದನ್ನು ಮುಸಲ್ಮಾನರು ಒಡೆದು ಹಾಕಿರುವರೆಂದು ತಿಳಿಯುತ್ತದೆ. ಲಕ್ಷ್ಮಿಯ ಒಂದು ಕೈ ಉಗ್ರನರಸಿಂಹನ ಸೊಂಟದ ಎಡಗಡೆಗೆ ಇರುತ್ತದೆ.

## ಬಡವಿ ಲಿಂಗ

ವಿಜಯನಗರದಲ್ಲಿಯೇ ಇದು ಒಂದು ದೊಡ್ಡ ಲಿಂಗವು. ಇದು ೧೨ಅಡಿ ಎತ್ತರವಿರುತ್ತದೆ. ಸದಾ ನೀರಿನಲ್ಲಿಯೇ ನಿಂತಿರುತ್ತದೆ. ಇದರ ಮೇಲೆ ಒಂದು ಗುಡಿಯು ಇರುತ್ತದೆ. ಗುಡಿಯಲ್ಲಿಯೇ ಒಂದು ಕಾಲುವೆಯು ಹರಿದು ಹೋಗುತ್ತದೆ. ಈ ಲಿಂಗವಿರುವ ಭಾಗ ತಗ್ಗು ಪ್ರದೇಶ. ಈ ಲಿಂಗದ ಕೆಳಗಿನ ಭಾಗದಲ್ಲಿ ಕಾಲುವೆ ಹರಿಯುತ್ತಿರುತ್ತದೆ. ಇದು ಹನ್ನೊಂದು ಮೈಲು ಉದ್ದವಾಗಿರುತ್ತದೆ. ಈಗ ಈ ಕಾಲುವೆಯ ನೀರಿನಿಂದ ೨೪೦೦ ಎಕರೆ ಜಮೀನಿಗೆ ನೀರುಣಿಸುತ್ತಾರೆ.

## ವೀರಭದ್ರನ ಗುಡಿ

ಕಮಲಾಪುರದ ದಾರಿಯ ಎಡಬಡಗೆ ಉದ್ದಾನ ವೀರಭದ್ರನ ಗುಡಿ ಇದೆ. ಹೆಸರಿಗೆ ತಕ್ಕಂತೆ ಮೂರ್ತಿಯು ಬಹಳ ಎತ್ತರ ಇದೆ. ೧೫೪೫ ರಲ್ಲಿ ಸ್ಥಾಪಿತವಾಗಿರಬಹುದು. ಇದು ಹನ್ನೆರಡು ಅಡಿ ಎತ್ತರವಿರುತ್ತದೆ. ಎದ್ದುನಿಂತ ವೀರಭದ್ರಮೂರ್ತಿ ಇರುವದರಿಂದ ಉದ್ದಾನ ವೀರಭದ್ರ ಎನ್ನುತ್ತಾರೆ. ಈ ವೀರಣ್ಣನ ಪೂಜೆಯನ್ನು ವೀರಶೈವರೂ ಈಗಲೂ ಮಾಡುತ್ತಾರೆ. ಈ ಗುಡಿಯ ಆವರಣದಲ್ಲಿ ಅಸಂಖ್ಯಾತ ಮಹಾಸತಿ ಕಲ್ಲುಗಳು ಇರುತ್ತವೆ.

## ಅಕ್ಕತಂಗಿಯರ ಕಲ್ಲು

ಮುಂದೆ ದಾರಿಯಲ್ಲಿ ಎರಡು ದೊಡ್ಡ ಬಂಡೆಗಲ್ಲುಗಳು ಒಂದಕ್ಕೊಂದು ಆತು ನಿಂತಿರುವದರಿಂದ ಇವುಗಳ ನಡುವೆ ವಿಶಾಲ ಬಯಲು ಪ್ರದೇಶವಿರುತ್ತದೆ ಇವು ಅಕ್ಕ-ತಂಗಿಯರ ಕಲ್ಲುಗಳು.

## ಪಾತಾಳೇಶ್ವರನ ಗುಡಿ

ಅಕ್ಕ-ತಂಗಿಯರ ದಿನ್ನೆಯ ಕೆಳಗಿನ ಗುಂಡಿಯ ಎದುರಿಗಿನ ಸೀಳು ದಾರಿಯ ಹತ್ತಿರದಲ್ಲಿ ನೆಲಪಾತಳಿಯ ಕೆಳಗಿರುವ ಗುಡಿಯೇ ಪಾತಾಳೇಶ್ವರನ ಗುಡಿ. ಇಲ್ಲಿ ಒಂದು ಸುಂದರ ಲಿಂಗವಿದೆ. ಇದು ನೀರಿನಿಂದ ತುಂಬಿರುತ್ತದೆ.

## ಗಜಶಾಲೆ

ಈ ಕಟ್ಟಡವು ಹನ್ನೊಂದು ಭಾಗವುಳ್ಳದ್ದು. ಇಲ್ಲಿ ಪಟ್ಟದ ಮತ್ತು ಮಹತ್ವದ ಆನೆಗಳಿಗೆ ಸ್ಥಳವಿದ್ದಿತು. ಇದರ ಹತ್ತಿರವೇ [Guards Quarters) ನಗರ ರಕ್ಷಕ ನಿವಾಸ ಕಟ್ಟಡವಿದೆ. ಈಗ ಅಲ್ಲಿ ಒಂದು ವಸ್ತುಸಂಗ್ರಹಾಲಯವಿರುತ್ತದೆ. ಒಂದು ಕೊಠಡಿಯಲ್ಲಿ ಶ್ರೀ ಕೃಷ್ಣದೇವರಾಯ ಮತ್ತು ಅವನ ಇಬ್ಬರ ರಾಣಿಯರ ಮೂರ್ತಿಗಳು ಅವೆ. ದಕ್ಷಿಣದಿಕ್ಕಿಗೆ ಶ್ರೀರಂಗನ ಸಾದಾತರದ ಗುಡಿಯುಂಟು. ಒಂಭತ್ತು ಅಡಿ ಹನುಮಂತನ ಮೂರ್ತಿ ಇರುತ್ತದೆ.

## ರಾಜರ ಆಸ್ಥಾನ ಭವನ

ಇದು ಹಜಾರಿ ರಾಮನ ಗುಡಿಯ ನೈಋತ್ಯ ದಿಕ್ಕಿಗೆ ಇರುತ್ತದೆ. ಒಂದು ಬಯಲಂಗಳದ ಎತ್ತರವಾದ ಕಟ್ಟೆಗೆ ಸಭಾಮಂಟಪ ಎನ್ನುತ್ತಾರೆ. ಆ ಕಟ್ಟೆಗೆ ಹತ್ತಿಹೋಗಲು ಮೆಟ್ಟಲುಗಳು ಇರುತ್ತವೆ.

## ಕಲ್ಲಿನ ಗೋದಲಿ

ಸಭಾಮಂಟಪದ ಗೋಡೆಯ ಎದುರು ೪೨ ಅಡಿ ಉದ್ದ ೪ ಅಡಿ ಅಗಲ ಮತ್ತು ೨ ಅಡಿ ಎತ್ತರವಾದ ಒಂದು ಕಲ್ಲಿನ ಗೋದಲಿ ಅದೆ. ಅದು ಕುದುರೆಗೆ ನೀರನ್ನು ಕುಡಿಸಲು ಇರಬಹುದು. ಅದು ಒಡೆದಿರುತ್ತದೆ

## ಅರಮನೆಯ ನೆಲಮಾಳಿಗೆ

ಸಭಾಮಂಟಪದ ಹಿಂದೆ ಸುಮಾರು ೪೦ ಅಡಿ ಅಂತರದ ಮೇಲೆ ಅರಮನೆಯ ನೆಲಮಾಳಿಗೆ ಇರುತ್ತದೆ. ಅದು ಗುಪ್ತಚಾರರ ಸ್ಥಾನವಾಗಿರಬಹುದು.

## ಸಾರ್ವಜನಿಕ ಸ್ನಾನಗೃಹ

ಪ್ರಜೆಗಳ ಅನುಕೂಲತೆಗಾಗಿ ಆ ಕಾಲದ ಪ್ರಜಾರಕ್ಷಕರಾದ ಅರಸರು ಸಾರ್ವಜನಿಕ ಸ್ನಾನಗೃಹವನ್ನು ಕಟ್ಟಿಸಿದ್ದರು. ಇದು ಅರಮನೆಯ ಹಿಂದುಗಡೆ ಇರುತ್ತದೆ

## ಅರಮನೆಯ ಗದ್ದುಗೆ

ಅರಮನೆಯ ಪ್ರಾಕಾರವನ್ನು ಪ್ರವೇಶಿಸಿದ ನಂತರ ಬಲಕ್ಕೆ ೪೫ ಅಡಿ ಉದ್ದ ೩ ಅಡಿ ಅಗಲ ೩ಅಡಿ ತಗ್ಗಾದ ಒಂದು ಕಲ್ಲಿನ ದೊಡ್ಡ ದೋಣಿಯುಂಟು. ಇದರ ಹತ್ತಿರ ಒಂದು ಕಟ್ಟಡದ ನೆಲಗಟ್ಟು ಅದೆ. ಇದು ಒಂದು ಹಾಳುಬಿದ್ದ ಕಟ್ಟಡವು. ಇದು ವಿಜಯನಗರದಲ್ಲಿ ಅತಿ ವಿಸ್ತಾರವಾದ ನೆಲಗಟ್ಟು ಇದರ ಎದುರಿಗೆ ಒಂದು ಚಿಕ್ಕದಾದ ನೆಲಮನೆ ಉಂಟು. ದಾರಿಗೆ ಹೊಂದಿ ಬಲಗಡೆಯ ತಗ್ಗಿನಲ್ಲಿ ಶಿವನ ಗುಡಿಯುಂಟು. ಇದಕ್ಕೆ ಪ್ರಸನ್ನ ವಿರೂಪಾಕ್ಷ ಗುಡಿ ಎಂದೆನ್ನುತ್ತಾರೆ. ಇಲ್ಲಿ ಶಿವನ ಲಿಂಗು ಇರುತ್ತದೆ. ಅಲ್ಲಿ ನಾಗಕಲ್ಲುಗಳೂ ಇರುತ್ತವೆ.

## ರಾಣಿ ನಿವಾಸ

ಹಜಾರರಾಮನ ಗುಡಿಯ ಉತ್ತರಕ್ಕೂ ಮತ್ತು ಪೂರ್ವ ದಿಕ್ಕಿಗೂ ವಿಶಾಲವಾದ ಮೈದಾನವಿದೆ. ಮೈದಾನದ ಮಧ್ಯದ ಒಂದು ದಾರಿಯಿಂದ ಹೋದರೆ ಎತ್ತರವಾದ ಗೋಡೆಗಳ ಕೋಟೆ ಕಾಣುತ್ತದೆ. ಅದೇ ರಾಣಿ ನಿವಾಸವು.

## ರಾಣಿಯರ ಸ್ನಾನಮಂದಿರಗಳು

ಅಲ್ಲಿಂದ ಮುಂದೆ ಹೋದರೆ ರಾಣಿಯರ ಸ್ನಾನ ಮಂದಿರಗಳು. ಈ ಸ್ನಾನ ಮಂದಿರಗಳ ವಾಸ್ತುಶಿಲ್ಪವು ಹಿಂದೂ-ಮಹಮ್ಮದಿಯರ ಸಂಯುಕ್ತ ವಾಸ್ತುಶಿಲ್ಪವಾಗಿರುತ್ತದೆ. ವಿಜಯನಗರದ ವಾಸ್ತುಕಲೆಗಳಲ್ಲಿ ಇದೊಂದು ನವೀನವಾದರಿಯದು. ಮಧ್ಯದಲ್ಲಿ ಒಂದು ಚಿಕ್ಕ ಕೂಂಡವಿರುತ್ತದೆ. ತುಸು ದೂರದಲ್ಲಿ ಚಂದ್ರಶೇಖರನ ಚಿಕ್ಕದೇವಾಲಯವಿರುತ್ತದೆ. ಅದರ ಹತ್ತಿರ ಅಷ್ಟ ಕೋನಾಕೃತಿಯ ಒಂದು ಚಿಕ್ಕ ಸ್ನಾನಗೃಹವಿದೆ.

## ಕಮಲಮಹಲ

ಇದು ರಾಣಿವಾಸದ ಆವಾರದೊಳಗಿನ ಎರಡಂತಸ್ತಿನ ಗಚ್ಚಿನ ಕಟ್ಟಡವು ಕೆಳಗಿನ ಅಂತಸ್ತಿನಲ್ಲಿ ಗಟ್ಟಿಯಾದ ಕಂಬಗಳು ಇರುತ್ತವೆ. ಸುತ್ತಲೂ ಗೋಡೆ ಇರುವದಿಲ್ಲ. ಮೇಲಿನ ಅಂತಸ್ತಿಗೆ ಸಾಗಲು ಉತ್ತರ ಕಡೆಯ ಗೋಡೆಯಲ್ಲೂ ಪಾವಟಿಗೆಗಳುಂಟು. ಈ ಕಟ್ಟಡವು ಹಿಂದೂ-ಮುಸ್ಲಿಮ ಶಿಲ್ಪಕಲೆಯ ದ್ಯೋತಕವು. ಮಹಲದಿಂದ ಹೊರಗೆ ಬಂದರೆ ರಕ್ಷಕದಳದ ಮಂದಿರ ಕಾಣಿಸುತ್ತದೆ. ಅಲ್ಲಿ ಪ್ರದರ್ಶನಾಲಯವಿರುತ್ತದೆ. ರಂಗಸ್ವಾಮಿಯ ಗುಡಿ ಇರುತ್ತದೆ. ಈ ಗುಡಿಯಲ್ಲಿ ಒಂಭತ್ತು ಅಡಿ ಎತ್ತರದ ಹನುಮಂತನ ಪ್ರತಿಮೆ ಇದೆ. ಇದರ ಹಿಂದೆ ಹಾಳಾದ ಜೈನಗುಡಿ ಇರುತ್ತದೆ. ಇವೆರಡರ ಮಧ್ಯ ಪಟ್ಟದ ಎಲ್ಲಮ್ಮನ ಗುಡಿ ಇರುತ್ತದೆ.

## ಹಜಾರಿರಾಮನ ಗುಡಿ

ಈ ಗುಡಿಯು ಚಿಕ್ಕದಿದ್ದರೂ ಬಹಳ ಸುಂದರವಾಗಿರುತ್ತದೆ. ಇದನ್ನು ಶ್ರೀ ಕೃಷ್ಣದೇವರಾಯನು ೧೫೧೩ರಲ್ಲಿ ಕಟ್ಟಿಸಿದನು. ಕೆತ್ತನೆಯ ಕೆಲಸವು ಸುಂದರವಾಗಿರುತ್ತದೆ. ರಂಗಮಂಟಪದಲ್ಲಿಯ ನಾಲ್ಕು ಕಂಬಗಳಿಗೆ ಕೆತ್ತನೆಯ ಕೆಲಸವು ಸುಂದರವಾಗಿರುತ್ತದೆ. ಇದು ವೈಷ್ಣವ ಮತದ ಗುಡಿಯು. ಗೋಡೆಯ ಮೇಲೆ ಶೈವ ಮೂರ್ತಿಗಳು ಜೈನಮೂರ್ತಿಗಳು ಕೆತ್ತಲ್ಪಟ್ಟಿರುತ್ತವೆ. ಗುಡಿಯ ಒಳಗೂ ಹೊರಗೂ ಪುರಾಣದಲ್ಲಿಯ ಚಿತ್ರಕಥೆಗಳು ಕೆತ್ತಲ್ಪಟ್ಟಿರುತ್ತವೆ. ರಾಮಾಯಣದಲ್ಲಿಯ ಎಲ್ಲ ಮಹತ್ವದ ಸನ್ನಿವೇಶಗಳನ್ನು ಅಲ್ಲಿ ಕೆತ್ತಿದ್ದಾರೆ. ಅರಮನೆಯ ಹತ್ತಿರ ಈ ಗುಡಿಯು ಇರುತ್ತದೆ. ಈ ಸುಂದರವಾದ ಗುಡಿಯ ಒಳ ಅಂಗಳದ ಅಳತೆಯು ೧೧೦ ಅಡಿ ಅಗಲ ಹಾಗೂ ೨೦೦ ಅಡಿ ಉದ್ದವಿದೆ. ಗೋಡೆಯ ಮೇಲೆ ನಾನಾ ನೃತ್ಯಭಂಗಿಯ ಶಿಲಾಬಾಲಿಕೆಯರ ಮದನಿಕೆಯರ ಚಿತ್ರಗಳಿರುತ್ತವೆ. ಶಿಲ್ಪಕಲಾಸೌಂದರ್ಯದ ಹೆಗ್ಗುರುತು ಈ ಗುಡಿಯು. ಕಲೆಯ ನೈಪುಣ್ಯವನ್ನು ಈ ಗುಡಿಯನ್ನು ನೋಡಿ ಗುರುತಿಸಬೇಕು. ದೇವರ ಮುಂದಿರುವ ಮಂಟಪಕ್ಕೆ ಕಲ್ಯಾಣ ಮಂಟಪವೆಂದು ಹೇಳುತ್ತಾರೆ. ಇದನ್ನು ಶ್ರೀ ಕೃಷ್ಣದೇವರಾಯನು ಕಟ್ಟಿಸಿದನು. ರಾಮನ ಗುಡಿಯೊಳಗೆ ಸೀತಾದೇವಿಯ ಗುಡಿ ಇದೆ. ರಾಮಾಯಣದ ಪೂರ್ಣಪರಿಚಯವು ಕೆತ್ತನೆಯ ಕೆಲಸಗಳಲ್ಲಿಯೇ ವಿದಿತವಾಗುತ್ತದೆ.

ಹಜಾರ ರಾಮನ ಗುಡಿಯ ಎದುರಿಗೆ ಎತ್ತರವಾದ ಗೋಡೆಯ ಮಧ್ಯದಲ್ಲಿ ಅರಸಿಯರು ವಾಸಿಸತಕ್ಕ ಸ್ಥಳವಿದೆ. ಇದಕ್ಕೆ ಜನಾನಾ ಎನ್ನುತ್ತಾರೆ. ಒಂದು ಮೂಲೆಯಲ್ಲಿ ಕುಮಾರ ರಾಮನ ಗರಡಿಮನೆಯು ಇನ್ನೂ ಗಟ್ಟಿ-ಮುಟ್ಟಾಗಿರುತ್ತದೆ.

## ಅರಮನೆಯ ಗದ್ದುಗೆ

ಅರಮನೆಯ ಪ್ರಾಕಾರವನ್ನು ಪ್ರವೇಶಿಸಿದ ನಂತರ ಬಲಕ್ಕೆ ೪೫ ಅಡಿ ಉದ್ದ ೩ ಅಡಿ ಅಗಲ ೨ ಅಡಿ ತಗ್ಗಾದ ಒಂದು ಕಲ್ಲಿನ ದೊಡ್ಡ ದೋಣಿಯುಂಟು. ಇದರ ಹತ್ತಿರ ಒಂದು ಕಟ್ಟಡದ ನೆಲಗಟ್ಟು ಇದೆ. ಇದು ಒಂದು ಹಾಳುಬಿದ್ದ ಕಟ್ಟಡವು. ಇದು ವಿಜಯನಗರದಲ್ಲಿ ಅತಿ ವಿಸ್ತಾರವಾದ ನೆಲಗಟ್ಟು

# ಮಹಾನವಮಿ ದಿಬ್ಬ

ಶ್ರೀ ಕೃಷ್ಣದೇವರಾಯನು ಓಡಿಸಾ ಪ್ರಾಂತವನ್ನು ಗೆದ್ದುದರ ಸ್ಮಾರಕವಾಗಿ ೧೫೧೩ ರಲ್ಲಿ ಕಟ್ಟಿಸಿದನು. ಇದು ಸುಮಾರು ೧೫ ಅಡಿ ಎತ್ತರವಿದ್ದು ೬೫-೭೦ ಅಡಿ ವಿಶಾಲವಾಗಿರುತ್ತದೆ. ನವರಾತ್ರಿಯ ಉತ್ಸವದಲ್ಲಿ ರತ್ನಖಚಿತವಾದ ಸಿಂಹಾಸನವನ್ನು ಸ್ಥಾಪಿಸಿ ಅಲ್ಲಿ ರಾಜರು ಉತ್ಸವಗಳನ್ನು ಮಾಡುತ್ತಿದ್ದರೆಂದು ಕಾಣುತ್ತದೆ ಈ ದಿಬ್ಬದ ಸುತ್ತಲೂ ಯೋಧರು ಕುದುರೆ ಆನೆ, ಒಂಟೆ ನೃತ್ಯದವರು ಮುಂತಾದ ಅನೇಕ ಸುಂದರ ಚಿತ್ರಗಳನ್ನು ಕೊರೆದಿರುತ್ತಾರೆ. ಈ ಎತ್ತರದ ಮೇಲೆ ನಿಂತರೆ ರಾಣಿವಾಸ, ಆನೆಸಾಲು ಹಜಾರರಾಮನ ಗುಡಿ ದಂಡನಾಯಕನ ವಾಸಸ್ಥಳ ಮುಂತಾದವು ಕಾಣುತ್ತವೆ. ಈ ದಸರಾದಿಬ್ಬಕ್ಕೆ ಸಿಂಹಾಸನ ವೇದಿಕೆ ಅನ್ನುತ್ತಾರೆ. ಈ ದಿಬ್ಬದ ಉತ್ತರಕ್ಕೆ ಅಖಂಡಕಲ್ಲಿನಲ್ಲಿ ಕಟೆದ ಒಂದು ಬಾಗಿಲು ಬಿದ್ದಿದೆ. ಅದು ಯಾವ ಕಟ್ಟಡಕ್ಕೆ ಸಂಬಂಧಿಸಿರುತ್ತದೆ ಎಂಬುದು ತಿಳಿದಿರುವದಿಲ್ಲ. ಅದರ ಕೆತ್ತನೆಯ ಕಾರ್ಯ ಅತಿ ಸೂಕ್ಷ್ಮವಾಗಿರುತ್ತದೆ.

# ವಿಜಯಮಂದಿರ

ಶ್ರೀ ಕೃಷ್ಣದೇವರಾಯನು ಕಳಿಂಗ ದೇಶವನ್ನು ಗೆದ್ದ ನಂತರ ತನ್ನ ವಿಜಯದ ಸ್ಮಾರಕವಾಗಿ ಈ ದಸರಾದಿಬ್ಬದ ಮೇಲೆ ಒಂದು ಚೌಕನ್ನು ಕಟ್ಟಿಸಿದ್ದರಿಂದ ಅದಕ್ಕೆ ವಿಜಯಮಂದಿರ ಎನ್ನುತ್ತಾರೆ.

# ಪಟ್ಟಾಭಿರಾಮನ ಗುಡಿ

ವಿಜಯನಗರದ ಅರಮನೆಯ ಅವಶೇಷಗಳನ್ನು ದಾಟಿ ಕಮಲಾಪುರಕ್ಕೆ ಹೋಗುವ ದಾರಿಯ ಪೂರ್ವಕ್ಕೆ ಬಳ್ಳಾರಿಯ ಮಾರ್ಗದ ಮೇಲೆ ಸುಮಾರು ಅರ್ಧಮೈಲು ಅಂತರದ ಮೇಲೆ ಒಂದು ವಿಶಾಲದ ರುಕ್ಷ ಪ್ರದೇಶದಲ್ಲಿ ಅತಿ ದೊಡ್ಡದಾದ ಈ ಗುಡಿಯು ನಿಂತಿದೆ. ಇದನ್ನು ಅಚ್ಯುತರಾಯನು ಕಟ್ಟಿಸಿದನು. ಗುಡಿಯಲ್ಲಿಯ ಕೆತ್ತನೆ ಕಾರ್ಯವು ಅಷ್ಟು ಸೂಕ್ಷ್ಮವಾಗಿರುವದಿಲ್ಲ. ಇಲ್ಲಿ ಭಗ್ನವಾದ ಶಿಲಾಮೂರ್ತಿಗಳು ಇರುತ್ತವೆ.

## ಗಾಣಗಿತ್ತಿಯ ಗುಡಿ

ಕಮಲಾಪುರದಿಂದ ಕಂಪಲಿಗೆ ಹೋಗುವ ಮಾರ್ಗದಲ್ಲಿ ಕೋಟೆಯ ಗೋಡೆಯನ್ನು ದಾಟಿ ಬಲಗಡೆಗೆ ಈ ಗುಡಿ ಇರುತ್ತದೆ. ಇದು ಜೈನ ದೇವಾಲಯವು. ಮಹಾದ್ವಾರದ ಮೇಲೆ ಜೈನ ಸಾಧುವಿನ ವಿಗ್ರಹವು ಕೆತ್ತಲ್ಪಟ್ಟಿದೆ. ಮತ್ತು ಅಂಗಳದಲ್ಲಿ ಒಂದೇ ಕಲ್ಲಿನಲ್ಲಿ ಸಿದ್ಧಪಡಿಸಿದ ದೀಪ ಸ್ತಂಭ ಇರುತ್ತದೆ. ಈ ದೇವಾಲಯವು ೧೩೮೫ರಲ್ಲಿ ಕಟ್ಟಲ್ಪಟ್ಟಿತು. ಇದರ ಹತ್ತಿರ ಬಲಭಾಗಕ್ಕೆ ಭೀಮನ ಮಹಾದ್ವಾರವೆಂಬ ಅಗಸೆಯ ಬಾಗಿಲುಂಟು. ಇಲ್ಲಿಂದ ಅರ್ಧಮೈಲು ಅಂತರದ ಮೇಲೆ ಮಾರ್ಗವು ಒಡೆಯುತ್ತದೆ. ಎಡಬದಿಯಮಾರ್ಗವು ಆನೇಗುಂದಿಗೂ ಬಲಬದಿಯ ಮಾರ್ಗವು ಕಂಪಲಿಗೂ ಹೋಗುತ್ತದೆ. ಈ ಗುಡಿಯನ್ನು ಹದಿನೇಳನೆಯ ತೀರ್ಥಂಕರರು "ಕಂತು ಜಗನ್ನಾಥನ" ಹೆಸರಿನಲ್ಲಿ ಕಟ್ಟಿಸಿದರು.

## ಭೀಮನ ಅಗಸಿ

ಗಾಣಗಿತ್ತಿಯ ಗುಡಿಯ ಹಿಂದೆ ಸುಮಾರು ೧೫೦ ಅಡಿ ದೂರದಲ್ಲಿ ಭೀಮನ ಅಗಸಿ ಬಾಗಿಲು ಇರುತ್ತದೆ. ಈ ಅಗಸಿಯ ಮುಂದಿನ ಭಾಗದಲ್ಲಿ ಮಹಾಭಾರತದ ಕುರುಕ್ಷೇತ್ರ ಯುದ್ಧದಲ್ಲಿ ಭೀಮನು ದುಶ್ಯಾಸನನ ಹೊಟ್ಟೆಯನ್ನು ಹರಿದು ಕರುಳು ಕಿತ್ತಿರುವ ಪ್ರಸಂಗವನ್ನು ಚಿತ್ರಿಸಲಾಗಿರುತ್ತದೆ. ಈ ಚಿತ್ರವನ್ನು ಕಲ್ಲಿನಲ್ಲಿ ಕೆತ್ತಿದ್ದಾರೆ. ಅಗಸಿಯು ಬಹಳ ದೊಡ್ಡದಿರುತ್ತದೆ.

## ಹನುಮನ ಅಗಸಿ

ಭೀಮನ ಅಗಸಿಯಿಂದ ಸ್ವಲ್ಪ ಹಿಂದಕ್ಕೆ ಹೊರಳಿದರೆ ಅಲ್ಲಿ ಒಂದು ಚಿಕ್ಕ ಅಗಸಿ ಸಿಗುತ್ತದೆ. ಇದಕ್ಕೆ ಹನುಮನ ಅಗಸಿ ಎಂದೆನ್ನುತ್ತಾರೆ. ಹನುಮನು ಭೀಮನಷ್ಟೇ ಬಲಶಾಲಿಯಾಗಿದ್ದರೂ ಆಕಾರದಲ್ಲಿ ಚಿಕ್ಕವನು. ಆದುದರಿಂದ ಆತನದು ಚಿಕ್ಕ ಅಗಸಿ.

## ಮಾಲ್ಯವಂತ ರಘುನಾಥ ದೇವಾಲಯ

ಕಮಲಾಪುರ–ಕಂಪ್ಲಿ ರಸ್ತೆಯ ಮಧ್ಯದಲ್ಲಿ ಈ ದೇವಾಲಯವು

ಇರುತ್ತದೆ. ದ್ರವಿಡಿಯನ್ ಸಂಸ್ಕೃತಿಯ ಹೆಗ್ಗುರುತಾಗಿರುತ್ತದೆ. ತಿರುಮಲ ರಾಯನಿಂದ ಕಟ್ಟಿಸಲ್ಪಟ್ಟಿರುತ್ತದೆ. ಶ್ರೀರಾಮ ಸೀತೆ ಲಕ್ಷ್ಮಣ ಮತ್ತು ಹನುಮಂತರ ವಿಗ್ರಹಗಳನ್ನು ಇಲ್ಲಿ ಕೆತ್ತಿರುತ್ತಾರೆ. ಎರಡೂ ಬದಿಗೆ ಸಪ್ತರ್ಷಿಗಳ ಕಲ್ಲಿನ ಪ್ರತಿಮೆಗಳು ಇರುತ್ತವೆ. ಪ್ರತಿವರ್ಷ ಎಪ್ರಿಲ್ ತಿಂಗಳಲ್ಲಿ ತೇರು ಆಗುತ್ತದೆ. ಈ ಗುಡಿಯ ಹೊರಗೋಡೆಯ ಮೇಲೆ ಮೀನ, ಸಮುದ್ರ ಪ್ರಾಣಿಗಳು, ಸಮುದ್ರ ಸರ್ಪ ಮುಂತಾದ ಚಿತ್ರಗಳು ಕೆತ್ತಲ್ಪಟ್ಟಿರುತ್ತವೆ. ಗುಡಿಯ ಪ್ರಾಕಾರವು ದೊಡ್ಡದಿರುತ್ತದೆ. ಹನುಮಂತನು ಲಂಕೆಗೆ ಹೋಗಿ ಸೀತಾದೇವಿಯ ವಿಷಯವನ್ನು ತರುವವರೆಗೆ ಶ್ರೀ ರಾಮನು ಇಲ್ಲಿಯೇ ತಂಗಿದ್ದನೆಂದು ಹೇಳುತ್ತಾರೆ. ಮಾಲ್ಯವಂತ ಬೆಟ್ಟವು ತುಂಬ ಎತ್ತರವಾಗಿದ್ದು ಸುತ್ತಲಿನ ಸೊಬಗವು ಬಹು ರಮ್ಯವಾಗಿರುತ್ತದೆ.

ರಘುನಾಥ ದೇವಾಲಯದ ಹಿಂಬದಿಯಲ್ಲಿ ಒಂದೇ ದೊಡ್ಡ ಬಂಡೆಯ ಮೇಲೆ ಶೈವದೇವಾಲಯವು ಕೆಳಗೆ ಅದರ ಪಕ್ಕದಲ್ಲಿ ಹನುಮಂತನ ಚಿಕ್ಕ ಗುಡಿಯೂ ಇರುತ್ತದೆ. ಹನುಮಂತನ ಗುಡಿಯ ಎದುರಿಗಿನ ಬಂಡೆಯಲ್ಲಿ ಸೀಳುಬಿಟ್ಟಿದ್ದು ಇದರ ಎರಡೂ ಬದಿಗೆ ಹಲವಾರು ಲಿಂಗಗಳಿರುತ್ತವೆ.

ಈ ಗುಡ್ಡಕ್ಕೆ ಕಿಷ್ಕಿಂಧೆ ಎಂದೂ ಕರೆಯುತ್ತಾರೆ. ಇಲ್ಲಿಯೇ ಶ್ರೀರಾಮನು ವಾಲಿಯನ್ನು ಕೊಂದದ್ದು. ಸುಗ್ರೀವನಿಗೆ ಪಟ್ಟಾಭಿಷೇಕ ಮಾಡಿದನು.

## ಮಸೀದೆ

ಕಮಲಾಪುರದ ಎಡಗಡೆಯ ಬದಿಯ ರಸ್ತೆಗೆ ಹೊಂದಿ ಸಯ್ಯದ ನೂರುಲ್ಲ ಖಾದ್ರಿ ಅವರ ಸ್ಮಾರಕಾರ್ಥವಾಗಿ ಒಂದು ಮಸೀದೆ ಇರುತ್ತದೆ. ರಮಝಾನದ ಹದಿನೈದನೆಯ ದಿನ ಅಲ್ಲಿ ಉತ್ಸವವಾಗುತ್ತದೆ.

## ವೀರಭದ್ರಸ್ವಾಮಿ ಗುಡಿ

ಮಾತಂಗ ಪರ್ವತದ ಪೂರ್ವಕ್ಕೆ ವೀರಭದ್ರಸ್ವಾಮಿ ಗುಡಿ ಇರುತ್ತದೆ ೭×೬ ಫೂಟು ಇರುವ ಮೂರ್ತಿಯು ಭವ್ಯವಾಗಿರುತ್ತದೆ. ಈ ಗುಡಿಗೆ ಇನ್ನೊಂದು ೬×೪ ಫೂಟಗೆ ಮಂಟಪವಿರುತ್ತದೆ. ಅದಕ್ಕೆ ತೆನ್ನಾಲಿ ರಾಮಕೃಷ್ಣನ ಮಂಟಪವೆನ್ನುತ್ತಾರೆ.

## ಚಂಡಿಕೇಶ್ವರ ಮಂದಿರ

ಶ್ರೀ ವೀರಭದ್ರಸ್ವಾಮಿ ಗುಡಿಯ ಕೆಳಗೆ ಇರುತ್ತದೆ. ಪಶ್ಚಿಮದ ಮೂಲೆಯಲ್ಲಿ ಒಂದು ಗುಹೆಯಲ್ಲಿ ಲಿಂಗಗಳನ್ನು ಅಖಂಡವಾದ ಕಲ್ಲಿನಲ್ಲಿ ಕೊರೆದಿರುತ್ತಾರೆ.

## ದಶಾವತಾರ

ಚಂಡಿಕೇಶ್ವರಿಯ ಪೂರ್ವಕ್ಕೆ ಎರಡು ಫರ್ಲಾಂಗಿನಲ್ಲಿ ಒಂದು ಮಂಟಪ ವಿರುತ್ತದೆ. ಅಲ್ಲಿ ದಶಾವತಾರದ ಚಿತ್ರಗಳನ್ನು ಕೊರೆದಿರುತ್ತಾರೆ.

### ವಿಜಯ ನಗರದ ಇನ್ನುಳಿದ ಎರಡು ರಾಜಧಾನಿಗಳು

## ಪೆನುಗೊಂಡೆ

ಗುಂತಕಲ್ಲ ಬೆಂಗಳೂರು ಮಾರ್ಗ ಮೇಲೆ ಇರುವ ಈ ಊರು ದೊಡ್ಡದಿರುತ್ತದೆ ಇಲ್ಲಿ ಎಲ್ಲ ತರಹದ ಅನುಕೂಲತೆಗಳು ಇರುತ್ತವೆ. ಶಾಲೆಗಳೂ ಇಲ್ಲಿ ಉಂಟು. ಒಟ್ಟು ಜನಸಂಖ್ಯೆಯ ಅರ್ಧ ಜನರು ಕನ್ನಡಿಗರು ಇರುತ್ತಾರೆ ರಕ್ಕಸ ತಂಗಡಗಿಯ ಯುದ್ಧದ ನಂತರ ವಿಜಯನಗರಕ್ಕೆ ಪೆನುಗೊಂಡೆಯು ರಾಜಧಾನಿಯಾಗಿತ್ತು. ಇದರ ಸುತ್ತಲೂ ಭದ್ರವಾದ ಕೋಟೆಯಿರುತ್ತದೆ. ಊರ ಹೊರಗೆ ಮುಸಲ್ಮಾನ ಸಾಧುವಿನ ಒಂದು ಗೋರಿ ಇರುತ್ತದೆ. ಅದು ಮುಸ್ಲೀಮರ ಪವಿತ್ರ ಸ್ಥಳ.

## ಚಂದ್ರಗಿರಿ

ಇದು ತಿರುಪತಿ ಕ್ಷೇತ್ರದಿಂದ ಏಳು ಮೈಲು ಅಂತರದ ಮೇಲಿದೆ. ಇಲ್ಲಿ ವಿಜಯನಗರದ ಕೋಟೆಯ ಅರಮನೆಯೂ ಕಾಣುತ್ತವೆ. ಪೆನುಗೊಂಡೆಯ ನಂತರ ಚಂದ್ರಗಿರಿ ರಾಜಧಾನಿಯಾಗಿತ್ತು. ಅಲ್ಲಿಯ ಅಂದಿನ ಅರಮನೆಯು ಈಗ ಪ್ರವಾಸಿ ಮಂದಿರವಾಗಿರುತ್ತದೆ.



# ಭಾಗ ೪

## ತುಂಗಭದ್ರಾ ಆಣೆಕಟ್ಟು

ಮೈಸೂರು ರಾಜ್ಯದಲ್ಲಿರುವ ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ ತಾಲೂಕು ಇರುತ್ತದೆ. ಹೊಸಪೇಟೆಯು ಬಳ್ಳಾರಿ ರೈಲು ನಿಲ್ದಾಣದಿಂದ ನಾಲ್ವತ್ತು ಮೈಲು ದೂರದಲ್ಲಿದೆ. ಇದು ೬೦,೦೦೦ ಜನಸಂಖ್ಯೆ ಇರುವ ಪಟ್ಟಣವು. ಇಲ್ಲಿ ಸಕ್ಕರೆ ಕಾರಖಾನೆ ಇರುತ್ತದೆ.

ಹೊಸಪೇಟೆಯ ತುಂಬ ನೀರಾವರಿ ಸೌಕರ್ಯವಿರುತ್ತದೆ. ಭೂಮಿಯು ಫಲವತ್ತಾದದ್ದು. ಕಬ್ಬನ್ನು ಇಲ್ಲಿ ಹೆಚ್ಚು ಬೆಳೆಯುತ್ತಾರೆ. ಬಾಳೆಹಣ್ಣನ್ನು ಬೆಳೆಯುತ್ತಾರೆ.

ಶ್ರೀ ಕೃಷ್ಣದೇವರಾಯನು ತನ್ನ ಪತ್ನಿ ತಿರುಮಲದೇವಿಯ ಸ್ಮಾರಕಾರ್ಥವಾಗಿ ಈ ಪಟ್ಟಣವನ್ನು ಕಟ್ಟಿಸಿದ್ದಾನೆ. ಅದಕ್ಕೆ ಮೊದಲು ತಿರುಮಲದೇವಿ ಪಟ್ಟಣ ಎಂದು ಕರೆಯುತ್ತಿದ್ದರು. ಅದು ಹೊಸದಾಗಿ ಕಟ್ಟಿದುದರಿಂದ ಹೊಸ ಪಟ್ಟಣ ಎಂದು ಕರೆಯುತ್ತಿದ್ದರು. ಅದು ರೂಢಿಯಲ್ಲಿ ಹೊಸಪೇಟೆಯಾಯಿತು.

ಇದೇ ರೀತಿಯಾಗಿ ಶ್ರೀ ಕೃಷ್ಣದೇವರಾಯನು ತಮ್ಮ ತಾಯಿಯ ಸ್ಮಾರಕಾರ್ಥವಾಗಿ ನಾಗಲಾಪುರ ಕಟ್ಟಿಸಿದನು. ಈಗ ಅದು ನಾಗವಳ್ಳಿ ಎಂದು ಕರೆಯುತ್ತಾರೆ.

ಹೊಸಪೇಟೆ ಬಸ್ಸ ನಿಲ್ದಾಣದಿಂದ ಮೂರುಮೈಲು ಅಂತರದಲ್ಲಿ ತುಂಗಭದ್ರಾ ಆಣೆಕಟ್ಟು ಇರುತ್ತದೆ. ಬಸ್ಸುಗಳು, ಬಂಡಿಗಳು, ಜಟಕಾಗಳು ಯಾವಾಗಲೂ ದೊರಕುತ್ತವೆ. ಹರಪನಹಳ್ಳಿಗೆ ಹೋಗುವ ದಾರಿಯು ಬಸ್ಸ ನಿಲ್ದಾಣದಿಂದ ಅರ್ಧ ಮೈಲು ಅಂತರದ ಮೇಲೆ ಎರಡು ಭಾಗವಾಗಿರುತ್ತದೆ. ಮುಂದೆ ಎಡಗಡೆ ದಾರಿಯು ಒಂದು ದಾವಣಗೆರೆಗೆ ಹೋಗುತ್ತದೆ. ಇನ್ನೊಂದು ಶಿವಮೊಗ್ಗೆಗೆ ಹೋಗುತ್ತದೆ.

ಬಲಗಡೆ ದಾರಿಯು ತುಂಗಭದ್ರಾ ಆಣೆಕಟ್ಟಿಗೆ ಹೋಗುತ್ತದೆ. ಇಲ್ಲಿಂದ ಎರಡುವರೆ ಮೈಲು ಮುಂದೆ ಹೋದರೆ ಆಣೆಕಟ್ಟಿನ ಬಸ್ಸ ನಿಲ್ದಾಣ ದೊರಕುತ್ತದೆ. ಇಲ್ಲಿ ಹೊಟೆಲ್ಲುಗಳು ಕಿರಾಣಿ ಅಂಗಡಿಗಳು ಇರುತ್ತವೆ.

ಬಸ್ಸು ನಿಲ್ದಾಣದಿಂದ ೨—೩ ಫರ್ಲಾಂಗ ದಾರಿ ಸಾಗಿದರೆ ತುಂಗ-ಭದ್ರಾ ಆಣೆಕಟ್ಟು ದೊರಕುತ್ತದೆ. ಇದನ್ನು ಸರಕಾರವು ಪಂಚವಾರ್ಷಿಕ ಯೋಜನೆಯ ಪ್ರಕಾರ ಕಟ್ಟಿಸಿದರು. ಇದು ಮುಗಿಯಲಿಕ್ಕೆ ಹತ್ತು ವರ್ಷ ಹಿಡಿಯಿತು. ಇದಕ್ಕೆ ಎರಡು ಹೆಸರುಗಳಿರುತ್ತವೆ. ಹೊಸಪೇಟೆಯ ಭಾಗದ ತುದಿಗೆ ವೈಕುಂಠ ಎಂದು ಮುನಿರಾಬಾದ ತುದಿಗೆ ಕೈಲಾಸ ಎಂದು ಅನ್ನು ತ್ತಾರೆ. ಹೀಗೆ ಹೊಸಪೇಟೆ – ಮುನಿರಾಬಾದ ನಡುವೆ ಈ ಆಣೆಕಟ್ಟು ಇರುತ್ತದೆ

ವೈಕುಂಠವು ಮದ್ರಾಸ ಸರಕಾರದಿಂದ, ಕೈಲಾಸವು ಹೈದ್ರಾಬಾದ ಸರಕಾರದಿಂದ ಕಟ್ಟಿಸಲ್ಪಟ್ಟಿದೆ.

## ವೈಕುಂಠ

ಇದನ್ನು ೨೦೦ ಫೂಟು ಎತ್ತರವಾದ ಗುಡ್ಡದ ಮೇಲೆ ಕಟ್ಟಿದ್ದಾರೆ. ಗುಡ್ಡದ ಮೇಲೆ ಬಸ್ಸುಗಳು, ಕಾರುಗಳು ಹೋಗುತ್ತವೆ. ಕಾಲ್ನಡಿಗೆಯಿಂದ ಗುಡ್ಡವನ್ನು ಏರುವದು ದುಃಸಾಧ್ಯ. ಗುಡ್ಡದ ಮೇಲೆ ಸರಕಾರೀ ಅತಿಥಿ ಗೃಹ ಇರುತ್ತದೆ. ಅಲ್ಲಿ ಒಂದು ಹೊಟೇಲು ಸಹ ಇರುತ್ತದೆ. ಪ್ರವಾಸಿಗರು ಅಲ್ಲಿ ಉಳಿಯಬಹುದು. ಶ್ರೀಮಂತರಿಗೆ ಮಾತ್ರ ಅದು ಸಾಧ್ಯ.

## ಪಂಪಾದರ್ಶನ

ಸರಕಾರೀ ಅತಿಥಿ ಗೃಹದ ಎದುರಿಗೆ ಲೈಟ ಹೌಸ ಇರುತ್ತದೆ. ಅದಕ್ಕೆ ಪಂಪಾದರ್ಶನ ಎಂದು ಅನ್ನುತ್ತಾರೆ. ಲೈಟ ಹೌಸ ಹತ್ತಿ ಹೋದರೆ ಒಂದು ಬದಿಗ ನೀರಿನ ಶೇಖರಣೆಯನ್ನು ಒಂದು ಮೈಲುದ್ದುದ ದೂರದಷ್ಟು ನೋಡ ಬಹುದು. ಇನ್ನೊಂದು ಬದಿಗೆ ಹಂಪಿ ವಿರೂಪಾಕ್ಷ ಗೋಪುರ, ಬಿಷ್ಟಪ ಗೋಪುರವನ್ನು ನೋಡಬಹುದು. ಇದು ಸುಂದರವಾದ ಸ್ಥಳವು.

## ವೈಕುಂಠದಲ್ಲಿ

ಆಂಜನೇಯ ಗುಡಿ—ಗುಡ್ಡದ ತುದಿಯಲ್ಲಿ ಆಂಜನೇಯನ ಗುಡಿ ಇರುತ್ತದೆ. ಗುಡಿಯ ತುದಿಯಲ್ಲಿ ನಾಲ್ಕೂ ಮೂಲೆಗೂ ಹನುಮಂತನ ಮೂರ್ತಿ ಇರುತ್ತವೆ. ಗೋಪುರದ ಮೇಲೆ ಕಾಂಗ್ರೆಸ್ಸ ಧ್ವಜದ ಕೆತ್ತನೆಯ ಕೆಲಸವಿರುತ್ತದೆ. ಧ್ವಜದ ಮಧ್ಯ ಶ್ರೀ ಪರಮೇಶ್ವರ ಪಾರ್ವತಿಯರ ಚಿತ್ರಗಳೂ ಶ್ರೀ ವಿಘ್ನೇಶ್ವರನ ಚಿತ್ರಗಳೂ ಕೆತ್ತಲ್ಪಟ್ಟಿರುತ್ತವೆ. ಗೋಪುರದ ಮೇಲ್ಭಾಗದಲ್ಲಿ ಹನುಮಂತನ ಮೂರ್ತಿಯು ಇರುತ್ತದೆ. ಎಡಗೈಯಲ್ಲಿ ಸಂಜೀವಿನಿ ಪರ್ವತವನ್ನು, ಬಲಗೈಯಲ್ಲಿ ತನ್ನ ಆಯುದ್ಧವನ್ನು ಹಿಡಿದುಕೊಂಡಿದ್ದಾನೆ. ಈಗ ಯುದ್ಧಕ್ಕೆ ಹೋಗುವನೇನೋ ಎನ್ನುವ ಶೈಲಿಯಲ್ಲಿ ನಿಂತಿದ್ದಾನೆ.

## ವೈಕುಂಠ ತೋಟ

ಇದಕ್ಕೆ ವೃಂದಾವನ ಎಂದು ಅನ್ನುತ್ತಾರೆ. ಇದು ಕಾರಂಜಿಗಳಿಂದ ವಿವಿಧ ತರಹದ ಹೂಗಳಿಂದ ತುಂಬಿರುತ್ತಡೆ. ಮಾನಸಿಕ ಉದ್ರೇಕಗಳನ್ನು ಚಿಂತೆಗಳನ್ನು ಇಲ್ಲಿ ಮರೆಯಬಹುದು. ರಾತ್ರಿಯಲ್ಲಿ ವಿದ್ಯುತ್ತ ಅಲಂಕಾರದಿಂದ ಸ್ವರ್ಗದಂತೆ ಕಂಗೊಳಿಸುವದು.

## ಹೈಡ್ರೋ ಇಲೆಕ್ಟ್ರಿಕ್ ವರ್ಕ್ಸ

ಗುಡ್ಡದ ಕೆಳಗೆ ವಿದ್ಯುತ್ತ ಉತ್ಪಾದನೆಯ ಪೂರೈಕೆಯ ಅಗರವಿರುತ್ತದೆ. ಮೂರು ಜಿಲ್ಹೆಗಳಿಗೆ ವಿದ್ಯುತ್ತನ್ನು ಪೂರೈಸುತ್ತದೆ. ಆದರೆ ಈ ಯೋಜನೆಯು ಅಷ್ಟು ದೊಡ್ಡದಲ್ಲ.

## ವಿದ್ಯುತ್ ಶಕ್ತಿ ಉತ್ಪಾದಕ ಕಾಲುವೆ

೩೫ ಫೂಟು ಅಗಲವಾದ ೧೨ ಫೂಟು ಆಳವಾದ ಒಂದು ಕಾಲುವೆ ಇರುತ್ತದೆ. ಇದು ಯಾವಾಗಲೂ ನೀರಿನಿಂದ ತುಂಬಿರುತ್ತದೆ. ಇದರಿಂದ ವಿದ್ಯುತ್ತನ್ನು ಉತ್ಪಾದಿಸುತ್ತಾರೆ.

ಕಮಲಾಪುರದಿಂದ ಹದಿನೈದು ಮೈಲು ಅಂತರದ ಮೇಲೆ ಹಂಪಿ ಪಾವರ ಹೌಸ ಇರುತ್ತದೆ. ಇಲ್ಲಿ ಒಂದು ಕಾಲುವೆ ಇದೆ. ಈ ಕಾಲುವೆಯ ಉದ್ದ ೨೫ ಮೈಲುಗಳು ಇದ್ದೂ ಭೂಮಿಗೆ ನೀರಾವರಿ ಉಣಿಸುತ್ತದೆ. ಮುಂದೆ

ಈ ಕಾಲುವೆಯು ೧೩೮ ಮೈ ದೂರ ಸಾಗಿದ ನಂತರ ಆಂಧ್ರ ರಾಜ್ಯದ ಕರ್ನೂಲ ಜಿಲ್ಹೆಗೆ ಹೋಗುತ್ತದೆ. ಅಲ್ಲಿಂದ ಸುಮಾರು ೩೧ ಮೈಲು ಸಾಗಿ ಹಗರಿ ಹೊಳೆಯನ್ನು ಕೊಡುತ್ತದೆ.

ಈ ರೀತಿಯಾಗಿ ಕಾಲುವೆಯು ವಿದ್ಯುತ್ತ ಉತ್ಪಾದನೆ ಮತ್ತು ಮೂರು ಲಕ್ಷ ಎಕರೆ ಭೂಮಿಗೆ ನೀರಾವರಿ ಪೂರೈಕೆ ನೆರವಾಗುತ್ತದೆ.

## ಆಣೆಕಟ್ಟು

ತುಂಗಭದ್ರಾ ಆಣೆಕಟ್ಟು ಕಟ್ಟಲಿಕ್ಕೆ ೧೫ ಕೋಟಿ ವೆಚ್ಚವಾಯಿತು ೨೦ ಸಾವಿರು ಕೆಲಸಗಾರರು ದಿನವೂ ದುಡಿಯುತ್ತಿದ್ದರು. ಆಣೆಕಟ್ಟು ೨ಮೈ. ಉದ್ದ ೧೬೦ಫೂಟು ಎತ್ತರವಿದೆ. ಮಲ್ಲಾಪುರದಲ್ಲಿ ಇದನ್ನು ಕಟ್ಟಿದ್ದಾರೆ

## ಕೈಲಾಸ (ಮುನಿರಾಬಾದ)

ತುಂಗಭದ್ರಾ ಆಣೆಕಟ್ಟನಿಂದ [ಅಂದರೆ ಮೂಲಸ್ಥಳದಿಂದ ೧೦೦ ಮೈ] ಬಲಕ್ಕೆಹೋದರೆ ಕೈಲಾಸವನ್ನು ತಲುಪುತ್ತೇವೆ. ಅಲ್ಲಿ ೩೨ದ್ವಾರಗಳಿಂದ ನೀರು ಹರಿಯುತ್ತದೆ. ಯಾಂತ್ರಿಕ ರೀತಿಯಿಂದ ದ್ವಾರಗಳು ಕಾರ್ಯಮಾಡುತ್ತವೆ. ಇದು ಮುನಿರಾಬಾದದಲ್ಲಿರುತ್ತದೆ.

## ಕೈಲಾಸದಲ್ಲಿ ಇಂದ್ರಭವನ

ಕೈಲಾಸ ಬೆಟ್ಟದ ಮೇಲೆ ಇಂದ್ರಭವನ ಎಂಬ ಸುಂದರವಾದ ಕಟ್ಟಡ ವಿರುತ್ತದೆ. ಕಟ್ಟಡವು ಹೊಗೆಬೋಟಿನ ಪ್ರಕಾರವಿರುತ್ತದೆ. ಅದರ ಸುತ್ತಲೂ ಸುಂದರವಾದ ದೊಡ್ಡ ಉದ್ಯಾನವಿರುತ್ತದೆ. ರಾತ್ರಿಯಲ್ಲಿ ವಿದ್ಯುತ್ತ ದೀಪದಿಂದ ಅಲಂಕೃತವಾಗಿ ನಿಜವಾದ ಕೈಲಾಸದಂತೆ ತೋರುತ್ತದೆ.

## ಗಣೇಶನ ಮಂದಿರ

ಶ್ರೀ ವಿಘ್ನೇಶ್ವರನ ಮಂದಿರವು ಚಿಕ್ಕದಾಗಿದ್ದರೂ ಅಲ್ಲಿ ಸುಂದರವಾದ ಮೂರ್ತಿ ಇರುತ್ತದೆ. ಸರಕಾರದವರು ಆಣೆಕಟ್ಟು ಕಟ್ಟುವದಕ್ಕಿಂತ ಮುಂಚಿತ ವಾಗಿಯೇ ಇದನ್ನು ಕಟ್ಟಿದ್ದಾರೆ.

# ಉಳಿದ ಸ್ಥಳಗಳು

ಕೈಲಾಸದಿಂದ ಅನತಿ ದೂರದಲ್ಲಿ ಸಾಲಾರ ಜಂಗ ಸಕ್ಕರೆ ಕಾರಖಾನೆ ಇರುತ್ತದೆ ಈ ಕಾರಖಾನೆಯಿಂದ ೩-೪ ಮೈಲು ಅಂತರದಲ್ಲಿ ಮುನಿರಾಬಾದ ರೈಲು ನಿಲ್ದಾಣವಿರುತ್ತದೆ. ರೈಲು ಹಳಿಯನ್ನು ದಾಟಿ ಒಂದು ಫರ್ಲಾಂಗ ಹೋದರೆ ಹುಲಿಗೆಮ್ಮ ದೇವತೆಯ ಗುಡಿ ಇರುತ್ತದೆ. ಚೈತ್ರ ಮಾಸದ ಹುಣ್ಣಿವೆ ಯಿಂದ ಒಂಬತ್ತನೆಯ ದಿನ ಅಲ್ಲಿ ಜಾತ್ರೆ ನಡೆಯುತ್ತದೆ. ಅದು ಮೂರು ದಿನ ನಡೆಯುತ್ತದೆ. ವೈಭವದಿಂದ ದೇವಿಯ ಪೂಜೆಯು ನಡೆಯುತ್ತದೆ. ಸಹಸ್ರಾರು ಜನರು ಭಕ್ತರು ಸೇರಿರುತ್ತಾರೆ. ಮುನಿರಾಬಾದ ನಿಲ್ದಾಣವು ಹುಬ್ಬಳ್ಳಿ-ಮೈಸೂರ ಅಥವಾ ಹುಬ್ಬಳ್ಳಿ-ಗುಂತಕಲ್ಲ ರೈಲು ದಾರಿಯಲ್ಲಿ ಇರುತ್ತದೆ.

ಕೈಲಾಸದಲ್ಲಿ "ಮಾಡೆಲ್ ಹೌಸ್" ಇರುತ್ತದೆ. ಅಲ್ಲಿ ಪ್ರವಾಸಿಗರಿಗೆ ಬೇಕಾಗುವ ವಿವರಣೆಗಳನ್ನು ಕೊಡುತ್ತಾರೆ.



# ಭಾಗ ೫

## ಮಹತ್ವದ ಐತಿಹಾಸಿಕ ವಿಷಯಗಳು

## ಹಂಪಿಯ ಮಹತ್ವ

ಚಾರಿತ್ರಿಕ—ವಿಜಯನಗರ ಸಾಮ್ರಾಜ್ಯದ ಮುಖ್ಯ ಆಡಳಿತ ಕೇಂದ್ರವು ಹೇಮಕೂಟವು. ಇಲ್ಲಿಯೇ ಪಂಪಾ ಸರೋವರ ಇರುತ್ತದೆ. ಇದು ಪವಿತ್ರವಾದ ಸ್ಥಳವು. ಪುರಾಣದ ಕಾಲದಲ್ಲಿ ದೇವರು ದೇವತೆಗಳು ಇಲ್ಲಿ ನೆಲಸಿದ್ದರೆಂದು ಹೇಳುತ್ತಾರೆ. ಶ್ರೀ ಹನುಮಂತನು ಹುಟ್ಟಿದ ಊರು ಈ ಹಂಪೆಯು. ರಾಮಾಯಣದಲ್ಲಿ ಬರುವ ಕಿಷ್ಕಿಂಧೆಯು ಇಲ್ಲಿಯೇ ಇರುತ್ತವೆ. ವಾಲಿ ಸುಗ್ರೀವರು ಹೋರಾಡಿದ್ದು ಇಲ್ಲಿಯೇ: ಶ್ರೀ ರಾಮನು ಸೀತೆಯನ್ನು ಸಂಶೋಧನೆಗಾಗಿ ಹನುಮಂತನನ್ನು ಕಳಿಸಿ ಆತನು ತಿರುಗಿ ಬರುವವರೆಗೂ ಇಲ್ಲಿಯೇ ನೆಲೆಸಿದ್ದನೆಂದು ಹೇಳುತ್ತಾರೆ.

ಮಾತಂಗ ವಶಿಷ್ಠ ಮುಂತಾದ ಮಹರ್ಷಿಗಳು ಇಲ್ಲಿಯೇ ತಮ್ಮ ತಪಸ್ಸನ್ನಾಚರಿಸಿದ್ದಾರೆ. ಹದಿಮೂರನೆಯ ಶತಮಾನದಲ್ಲಿ ಮುಸಲ್ಮಾನರು ಈ ಪ್ರದೇಶದ ಮೇಲೆ ದಾಳಿಯನ್ನು ಮಾಡಿದ್ದರು, ಶ್ರೀ ಭುವನೇಶ್ವರಿಯ ಕೃಪೆಯಿಂದ ಶ್ರೀ ವಿಜಯ ವಿದ್ಯಾರಣ್ಯರು ಸಾಮ್ರಾಜ್ಯ ಸ್ಥಾಪನೆಗೆ ಕೈಹಾಕಿದರು.

ಭೌಗೋಲಿಕ—ಹಂಪಿಯಲ್ಲಿ ಏಳು ಸಂಖ್ಯೆಯು ಮಹತ್ವವಾದದ್ದು. ಅಲ್ಲಿ ಏಳು ಬೆಟ್ಟಗಳು ಇರುತ್ತವೆ. ಹೇಮಕೂಟ, ಋಷ್ಯಶೃಂಗ, ಮಾತಂಗ, ಅಂಜನ ಪರ್ವತ, ಮಾಲ್ಯವಂತ, ಸುಗ್ರೀವ ಗುಹೆ, ಜಂಬನಾಥ, ಈ ಬೆಟ್ಟಗಳು ಸಮೃದ್ಧಿ ಪ್ರದೇಶಗಳಾಗಿರುತ್ತವೆ.

ಹೊಸಪೇಟೆಯಿಂದ ದಕ್ಷಿಣಕ್ಕೆ ಕೋಟೆಯಿಂದ ಉತ್ತರದ ಆನೆಗುಂದಿಯ ಕೊನೆಗೆ ಹಂಪಿಯು (ವಿಜಯನಗರ) ಹನ್ನೆರಡು ಮೈಲಾಗುತ್ತದೆ. ಪಶ್ಚಿಮದ ರಕ್ಷಣಾ ಕೋಟೆಯಿಂದ ಪೂರ್ವದ ರಕ್ಷಣಾ ಕೋಟೆಯ ವರೆಗೆ ಹತ್ತು ಮೈಲಾಗುತ್ತದೆ. ಉತ್ತರಕ್ಕೆ ತುಂಗಭದ್ರಾ ನದಿ ಇರುತ್ತದೆ. ಪಶ್ಚಿಮಕ್ಕೆ ಎತ್ತರವಾದ

ಗುಡ್ಡಗಳು ಸುತ್ತುವರೆದಿರುತ್ತವೆ. ಈಗ ಎತ್ತ ನೋಡಿದರೂ ಹಾಳುಬಿದ್ದ ಕೋಟೆಗಳೂ, ಬೆಟ್ಟಗಳೂ, ದೇವಾಲಯಗಳೂ ಮೂರ್ತಿಗಳು ಮುಂತಾದವುಗಳನ್ನು ನಾವು ಕಾಣುತ್ತೇವೆ. ಅವು ತಮ್ಮ ಹಿಂದಿನ ವೈಭವದ ಸ್ಮರಣೆಗಳನ್ನು ಮೆಲಕು ಹಾಕುತ್ತ ಸುಮ್ಮನೆ ನಿಂತಂತೆ ನಮಗೆ ಕಾಣುತ್ತವೆ.

ಏಳು ರಕ್ಷಣಾ ಕೋಟೆಗಳು....೧೪೪೩ ರಲ್ಲಿ ಅಬ್ದುಲ್ ರಝಾಕನು ವಿವರಣೆ ನೀಡಿದ ಪ್ರಕಾರ ಅಲ್ಲಿ ಏಳು ರಕ್ಷಣಾ ಕೋಟೆಗಳಿದ್ದವು. ಮೊದಲನೇ ಕೋಟೆ ಹೊಸಪೇಟೆಯ ನೈಋತ್ಯಕ್ಕೆ ಇದ್ದಿತು. ಎರಡನೆಯದು ಈಗಿನ ಹೊಸಪೇಟೆ ನಗರದಲ್ಲಿ ಮೂರನೆಯದು ಹೊಸಪೇಟೆಯ ಉತ್ತರಕ್ಕೆ, ನಾಲ್ಕನೆಯದು ಮಲಪನ ಗುಡಿ ಹಳ್ಳಿಯ ದಕ್ಷಿಣಕ್ಕೆ ಐದನೆಯದು ಮಲಪನ ಹಳ್ಳಿಯ ಉತ್ತರಕ್ಕೆ ಆರನೆಯದು ಕಮಲಾಪುರ ಕೆರೆಯ ದಕ್ಷಿಣಕ್ಕೆ ಏಳನೆಯದು ಅರಮನೆ ಮತ್ತು ಮುಖ್ಯಕಟ್ಟಡಗಳನ್ನು ಒಳಗೊಂಡು ಪೂರ್ವ-ಪಶ್ಚಿಮವಾಗಿ ೩.೧/೪ ಮೈಲು ಉತ್ತರ-ದಕ್ಷಿಣವಾಗಿ ಒಂದು ಮೈಲು ಇರುತ್ತದೆ. ಮೊದಲ ಮೂರು ಕೋಟೆಯ ನಡುವಿನ ಜಾಗೆಯನ್ನು ಹೊಲಗಳಿಗೆ, ತೋಟಗಳಿಗೆ, ಮನೆಗಳಿಗೆ ಉಪಯೋಗಿಸುತ್ತಿದ್ದರು. ಉಳಿದ ನಾಲ್ಕು ಕೋಟೆಯಲ್ಲಿ ಅಂಗಡಿಗಳು ಮನೆಗಳು ಪೇಟೆಯು ಇದ್ದವು.

## ವಿದ್ಯಾರಣ್ಯ-ಸಾಮ್ರಾಜ್ಯ ಸಂಸ್ಥಾಪಕ

೧೩೧೦ ರಲ್ಲಿ ದೆಹಲಿಯ ಸುಲ್ತಾನನಾದ ಅಲ್ಲಾವುದ್ದೀನ ಖಿಲಜಿಯು ತಮ್ಮ ಸೇನಾಪತಿಯಾದ ಮಲ್ಲಿಕ ಕಾಫರನನ್ನು ದ. ಹಿಂದುಸ್ತಾನದ ಮೇಲೆ ದಾಳಿ ಮಾಡಲು ಕಳಿಸಿದನು. ಆ ವೇಳೆಯಲ್ಲಿ ದ. ಹಿಂದುಸ್ತಾನದಲ್ಲಿ ಹೊಯ್ಸಳರು, ದೇವಗಿರಿಯ ಯಾದವರು, ಒರಂಗಲ್ಲದ ಕಾಕತೇಯರು, ಮಧುರೆಯ ಪಾಂಡ್ಯರಿದ್ದರು. ಈ ಎಲ್ಲ ರಾಜರನ್ನು ಸೋಲಿಸಿ ಸದೆಬಡೆದು ಮಲ್ಲಿಕನು ಅಪಾರ ಸಂಪತ್ತನ್ನು ದೋಚಿಕೊಂಡು ಹೋದನು. ಈ ದಾಳಿಯಿಂದ ಹಿಂದೂ ಜನರು ತತ್ತರಿಸಿದರು. ತಪಸ್ವಿಗಳಾದ ವಿದ್ಯಾರಣ್ಯರು ಇದನ್ನೆಲ್ಲ ನೋಡಿ ಹಿಂದೂ ಸಾಮ್ರಾಜ್ಯವನ್ನು ಮತ್ತೆ ಸ್ಥಾಪಿಸಬೇಕೆಂಬ ಮಹದುದ್ದೇಶದಿಂದ ತುಂಗಭದ್ರಾನದಿಯ ದಡಕ್ಕೆ ಬಂದು ತಪಸ್ಸಿಗೆ ಕುಳಿತರು.

ಶ್ರೀ ಭುವನೇಶ್ವರಿಯನ್ನು ಕುರಿತು ಅನಂತ ತಪದಲ್ಲಿ ಮಗ್ನರಾದರು. ನಂತರ ೧೩೩೩ ರಲ್ಲಿ ದೆಹಲಿಯ ರಾಜನಾದ ಮಹಮ್ಮದ ಬಿನ್ನ ತಘಲಕ ಆನೆ ಗುಂದಿಯ ಮೇಲೆ ದಾಳಿಮಾಡಿದನು. ಆನೆಗುಂದಿಯಲ್ಲಿ ಜಂಬುಕೇಶ್ವರಿಯು ಆಳುತ್ತಿದ್ದನು. ಈತನ ಹತ್ತಿರ ಐದು ಮಂದಿ ಸೈನ್ಯಾಧಿಕಾರಿಗಳಿದ್ದರು:— ಹುಕ್ಕಣ್ಣ, ಬುಕ್ಕಣ್ಣ, ಕಂಪಣ್ಣ, ಮುದ್ದಣ್ಣ, ಮತ್ತು ಮಾರಣ್ಣ ಇವರೆಲ್ಲರೂ ಹೊಯಸಳ ರಾಜನ ಮಕ್ಕಳು. ಯುದ್ಧದಲ್ಲಿ ಆನೆಗುಂದಿಯ ಅರಸನು ಸೋತನು. ಅರಸನ ಸಹಿತವಾಗಿ ಮುದ್ದಣ್ಣ ಮಾರಣ್ಣರನ್ನು ಸೆರೆಹಿಡಿದರು. ಹುಕ್ಕ–ಬುಕ್ಕರು ಹೇಗೊ ಪಾರಾಗಿ ವಿದ್ಯಾರಣ್ಯರ ಆಶ್ರಯವನ್ನು ಪಡೆದರು. ಹೀಗೆ ಆನೆಗುಂದಿಯು ದೆಹಲಿ ಸುಲ್ತಾನನ ವಶವಾಯಿತು. ಹುಕ್ಕ– ಬುಕ್ಕರು ವಿದ್ಯಾರಣ್ಯರ ಆಶ್ರಯವಾದರು. ವಿದ್ಯಾರಣ್ಯರು ಈ ಯುವಕರೀರ್ವರ ಕ್ಷಾತ್ರ ತೇಜಸ್ಸನ್ನು ಕಂಡು ತಮ್ಮ ಸಾಮ್ರಾಜ್ಯ ಸ್ಥಾಪನೆಗೆ ಅನುಕೂಲವಾಯಿತೆಂದು ಬಗೆದು ಅವರನ್ನು ತಮ್ಮ ಹತ್ತಿರ ಇರಿಸಿಕೊಂಡರು.

ಕಂಪಣನು ಯುದ್ಧರಂಗದಿಂದ ಪಾರಾಗಿ ಹೋಗಿ ಅಲ್ಲಲ್ಲಿ ಜನಜಾಗೃತಿ ಯನ್ನು ಮಾಡಿ, ಅನೇಕ ಜನರನ್ನು ಕೂಡಿಸಿ ಅವರಿಗೆ ಯುದ್ಧದ ತರಬೇತಿ ಯನ್ನು ನೀಡಿ ಮಾತಂಗ ಪರ್ವತದಲ್ಲಿದ್ದನು. ನಂತರ ವಿದ್ಯಾರಣ್ಯರ ಹತ್ತಿರ ಬಂದು ತಾನು ಮಾಡಿದ ಕಾರ್ಯವನ್ನು ನಿವೇದಿಸಿಕೊಂಡು ಎಲ್ಲ ಹಿಂದೂ ರಾಜರ ಬೆಂಬಲವಿದೆ ಎಂದು ತಿಳಿಸಿದನು. ಮತ್ತು ಮುಸ್ಲಿಮರನ್ನು ಯುದ್ಧ ದಲ್ಲಿ ಸೋಲಿಸಿ ಹಿಂದಿರುಗಿ ತಮ್ಮ ಪ್ರದೇಶಗಳನ್ನು ತೆಗೆದುಕೊಳ್ಳಬೇಕೆಂದು ಪ್ರತಿಜ್ಞೆ ಮಾಡಿದರು. ಅಕಸ್ಮಾತ್ತಾಗಿ ಮುಸ್ಲಿಮರಮೇಲೆದಾಳಿ ಮಾಡಿದ್ದರಿಂದ ಅವರೆಲ್ಲರೂ ಯುದ್ಧರಂಗದಿಂದ ಓಡಿ ಹೋದರು. ವಿದ್ಯಾರಣ್ಯರ ಸೈನ್ಯವು ವಿಜಯವನ್ನು ಸಾಧಿಸಿತು. ದೆಹಲಿಯ ರಾಜನು ಜೀವಸಹಿತವಾಗಿ ದೆಹಲಿಗೆ ಹೋದನು.

ಆನೆಗುಂದಿಯ ವಿಜಯದ ದಿನವೇ ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿ ಸುವ ಕಾರ್ಯವನ್ನು ಪ್ರಾರಂಭಿಸಿದರು. ವಿದ್ಯಾರಣ್ಯರು ಹೆಸರಿನಿಂದ ಸಂಸ್ಥಾಪನೆ ಗೊಂಡ ಸಾಮ್ರಾಜ್ಯವು ವಿಜಯನಗರವಾಯಿತು. ಕ್ರಮೇಣವಾಗಿ ಕೈಬಿಟ್ಟು ಹೋದ ರಾಜ್ಯಗಳನ್ನು ವಶಪಡಿಸಿಕೊಂಡು ಒಂದು ದೊಡ್ಡ ಸಾಮ್ರಾಜ್ಯ ಕಟ್ಟಿದರು ಹರಿಹರದೇವರಾಯನು ವಿಜಯನಗರ ಸಾಮ್ರಾಜ್ಯದ ಮೊದಲನೆ ರಾಜನಾದನು.

# ಬುಕ್ಕರಾಯನ ಕಾಲದಲ್ಲಿ ವಿಜಯ ನಗರ ಸಾಮ್ರಾಜ್ಯ

ಹರಿಹರ ದೇವರಾಯನ ತರುವಾಯ ಬುಕ್ಕರಾಯನು ಸಿಂಹಾಸನಕ್ಕೆ ಬಂದನು. ವಿಜಯನಗರದ ವೈಭವವು ಅತ್ಯುನ್ನತ ಶಿಖರಕ್ಕೇರಿತು. ಬುಕ್ಕ ರಾಯನು ಎಂದೂ ಸೋತವನಲ್ಲ. ಎಲ್ಲಿ ಹೋದರೂ ಆತನಿಗೆ ವಿಜಯವು ಕಟ್ಟಿಟ್ಟದ್ದು. ಗುಲಬುರ್ಗಾ ಪ್ರದೇಶವನ್ನು ಗೆದ್ದನು. ಅಲ್ಲಿದ್ದ ಸಂಪತ್ತನ್ನು ತೆಗೆದುಕೊಂಡು ಬಂದನು

ಶ್ರೀ ವಿದ್ಯಾರಣ್ಯರ ಆದೇಶದ ಪ್ರಕಾರ ಬುಕ್ಕರಾಯನು ತನ್ನ ಹಿರಿಯ ಮಗನಾದ ಕುಮಾರ ಕಂಪನನ್ನು ೫ ಲಕ್ಷ ಸೈನಿಕರೊಂದಿಗೆ ದಕ್ಷಿಣದ ಗಡಿಗೆ ಮುಸಲ್ಮಾನರನ್ನು ಹತ್ತಿಕ್ಕಲು ಕಳಿಸಿದನು. ಕುಮಾರ ಕಂಪನು ಮೈಸೂರನ್ನು ಜಯಿಸಿ, ದಿಂಡಿಗಲ್ಲು, ತ್ರಿಚನಾಪಳ್ಳಿ, ಅರ್ಕಾಟ್ ಮುಂತಾದವು ಗಳ ಮೇಲೆ ದಾಳಿ ಮಾಡಿದನು. ಅವುಗಳನ್ನು ಕೈವಶ ಮಾಡಿಕೊಂಡು ಮುಂದೆ ಮಧುರೆಯ ಮೇಲೆ ದಾಳಿಮಾಡಿದನು. ಮಧುರೆಯಲ್ಲಿ ಪಾಂಡ್ಯದ ರಾಜಕುಮಾರಿಯಾದ ಗಂಗಾದೇವಿಯು, ಮೀನಾಕ್ಷಿ ದೇವಿಯಿಂದ ವರದಾನ ಪಡೆದ ಕತ್ತಿಯನ್ನು ಕುಮಾರ ಕಂಪನ ಶೌರ್ಯಕ್ಕೆ ಮೆಚ್ಚಿ ಕೊಟ್ಟಳು. ಕುಮಾರ ಕಂಪನು ಅದನ್ನು ಸ್ವೀಕರಿಸಿದನು. ಗಂಗಾದೇವಿಗೆ ಆ ಕತ್ತಿಯು ವರದಾನವಾಗಿ ಬಂದಿತು. ಕುಮಾರ ಕಂಪನು ಸಂಗಡ ಗಂಗಾದೇವಿಯು ರಣ ರಂಗಕ್ಕೆ ಹೊರಟರು. ಮಧುರೆಯ ಮುಸ್ಲಿಮ ರಾಜನು ಹಿಂದೂ ರಾಜನ ಈ ಅಪರಿಮಿತ ಸೈನ್ಯವನ್ನು ನೋಡಿ ಹೆದರಿ ಹಿಂಜರಿದನು. ಆದರೂ ಯುದ್ಧ ಮಾಡಿ ಸೋತನು. ಮುಂದೆ ಕುಮಾರಕಂಪನು ರಾಮೇಶ್ವರದ ವರೆಗೆಹೋದನು ಅಲ್ಲಿ ವಿಜಯದ ಪತಾಕಿಯನ್ನು ಊರಿ ಮಧುರೆಗೆ ಬಂದು ಮೀನಾಕ್ಷಿ ದೇವಿಯ ಸನ್ನಿಧಾನದಲ್ಲಿ ಗಂಗಾದೇವಿಯನ್ನು ಮದುವೆಯಾದನು.

ಮುಂದೆ ಕೇರಳವನ್ನು ಗೆದ್ದು ವಿಜಯನಗರಕ್ಕೆ ಹಿಂದಿರುಗಿದನು. ಬುಕ್ಕ ರಾಯನ ಹೆಸರು ಮುಸಲ್ಮಾನರಿಗೆ ಸಿಂಹಸಪ್ನವಿದ್ದಂತೆ ಇತ್ತು. ಈತನು ವಿಜಯ ನಗರ ಸಾಮ್ರಾಜ್ಯವನ್ನು ಆರು ಭಾಗಗಳನ್ನಾಗಿ ಮಾಡಿದ್ದನು.

ಬುಕ್ಕರಾಯನು ಎಲ್ಲರನ್ನೂ ಸರಿಸಮನಾಗಿ ನಡೆಸಿಕೊಳ್ಳುತ್ತಿದ್ದನು.

ಅತಿ ಶೂರನಾದ ಜಾಣನಾದ ಅರಸನು. ಈತನ ತರುವಾಯ ಕುಮಾರ ಪಂಪನು ಹರಿಹರ ದೇವರಾಯ II ಎಂಬ ಹೆಸರಿನಿಂದ ಸಿಂಹಾಸನಕ್ಕೆ ಬಂದನು. ಈತನೂ ತಂದೆಯಷ್ಟೇ ಪರಾಕ್ರಮಿಯಾಗಿದ್ದನು. ಅಷ್ಟೇ ಕುಶಲತೆಯಿಂದ ರಾಜ್ಯಕಾರಭಾರವನ್ನು ಸಾಗಿಸಿದ್ದನು. ಈತನ ಕಾಲದಲ್ಲಿ ವಿದ್ಯಾರಣ್ಯರು ತಮ್ಮ ಸಚಿವ ಪದದಿಂದ ವಿಮುಕ್ತಿ ಹೊಂದಿ ಶೃಂಗೇರಿಗೆ ತಪಸ್ಸಿಗೆ ತೆರಳಿದರು. ಅವರ ನಂತರ ಅವರ ತಮ್ಮನಾದ ಸಾಯಣಾಚಾರ್ಯರು ಸಚಿವರಾದರು. ಕುಮಾರ ಪಂಪನು ಮೂವತ್ತು ವರ್ಷಗಳ ಕಾಲ ರಾಜ್ಯ ಆಳಿದನು. ಅವನ ತರುವಾಯ ೧ನೇ ದೇವರಾಯನು ಬಂದನು. ಒಳಸಂಚು ಮಾಡಿ ಸಹೋದರನಾದ ಎರಡನೆಯ ಬುಕ್ಕರಾಯ ೧ ನೇ ದೇವರಾಯನನ್ನು ತಳ್ಳಿ ಪಟ್ಟಕ್ಕೆ ಬಂದನು. ಈತನು ೨೦ ವರ್ಷ ರಾಜ್ಯವಾಳಿದನು. ನಂತರ ದೇವರಾಯನು ಪಟ್ಟಕ್ಕೆ ಬಂದನು. ನಂತರ ಪ್ರೌಢದೇವರಾಯನು (ವೀರವಿಜಯ ರಾಯ) ಪಟ್ಟಕ್ಕೆ ಬಂದನು.

## ಪ್ರೌಢ ದೇವರಾಯನ ಆಳಿಕೆಯಲ್ಲಿ ವಿಜಯನಗರ

ಶಾಂತಿ ಮತ್ತು ಸುವ್ಯವಸ್ಥೆ ಆಡಳಿತದ ಇನ್ನೊಂದು ಹೆಸರು ಪ್ರೌಢ ದೇವರಾಯ. ಈತನ ನಿಜವಾದ ಹೆಸರು ವಿಜಯರಾಯ. ಪ್ರೌಢ ಪ್ರತಾಪಿ ಎಂಬ ಹೆಸರಿನಿಂದ ಸಿಂಹಾಸನವನ್ನೇರಿದನು. ಈತನ ಆಳಿಕೆಯಲ್ಲಿ ಯಾವ ಯುದ್ಧಗಳೂ ನಡೆಯಲಿಲ್ಲ. ಎಲ್ಲ ಮಾಂಡಲೀಕ ಅರಸರು ವಿಧೇಯರಾಗಿದ್ದರು. ಹೊರದೇಶಗಳ ಕೂಡ ವ್ಯಾಪಾರ-ವ್ಯವಹಾರ ಸುಗಮವಾಗಿ ಸಾಗಿತ್ತು. ೧೮ ವರ್ಷದವನಿದ್ದಾಗ ಈತನು ಸಿಂಹಾಸನಕ್ಕೆ ಬಂದನು. ಅಷ್ಟೇ ಚಿಕ್ಕ ವಯಸ್ಸಿನಲ್ಲಿ ರಾಜ್ಯಸೂತ್ರವನ್ನು ವಹಿಸಿಕೊಂಡರೂ ಶಾಂತತೆಯಿಂದ ದಕ್ಷತೆಯಿಂದ ರಾಜ್ಯವಾಳಿದನು. ಈತನಿಗೆ ಶಾಂತಿಯ ರಾಜನೆಂದು ಹೆಸರಾಗಿತ್ತು. ಈತನ ಆಸ್ಥಾನದಲ್ಲಿ ಎಂಟು ಕವಿಗಳಿದ್ದರು. ಕುಮಾರವ್ಯಾಸ[?] ಮತ್ತು ಚಾಮರಸರು ಪ್ರಮುಖರು. ಸಾಹಿತ್ಯ-ಸಂಸ್ಕೃತಿಗೆ ಹೆಚ್ಚಿನ ಉತ್ತೇಜನವೀಯುತ್ತಿದ್ದನು. ಆತನು ಸ್ವತಃ ಕವಿ-ಕಲಾವಿದ. ಈತನ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯದ ಉತ್ತರದ ಗಡಿ

ಕೃಷ್ಣಾನದಿ ದಕ್ಷಿಣದ ಗಡಿ ಸಿಂಹಳ ನಡುಗಡ್ಡೆ ಯಾವ ತೊಂದರೆ ತೊಡಕು ಗಳಿಲ್ಲದೇ ರಾಜ್ಯವನ್ನು ಆಳಿದನು.

ಕುಮಾರವ್ಯಾಸನು ರಚಿಸಿದ ಮಹಾಭಾರತ ಈತನ ಕಾಲದಲ್ಲಿಯೇ ಆದಕ್ಕೊ ಒಂದು ಕಥೆಯಿದೆ. ಒಂದು ಸಲ ರಾಜನು ಆಸ್ಥಾನದಲ್ಲಿದ್ದ ಕವಿಗಳಿಗೆ ಒಂದು ಒಳ್ಳೆಯ ಕಾವ್ಯವನ್ನು ಬರೆದು ತೋರಿಸಿದರೆ ಅವರಿಗೆ ಮನ್ನಣೆಯನ್ನು ನೀಡುವೆನೆಂದು ಹೇಳಿದನು. ಅಲ್ಲಿ ಚಾಮರಸ ಕವಿ ಮತ್ತು ಕುಮಾರವ್ಯಾಸ ಇಬ್ಬರೂ ಇದ್ದರು. ಮಹಾಭಾರತವನ್ನು ಬರೆಯಬೇಕೆಂದು ನಿರ್ಧರಿಸಿದರು. ಅಂತೆಯೇ ಈ ಉಭಯ ಕವಿಗಳು ಮಹಾಭಾರತವನ್ನು ಮುಗಿಸಿದರು. ನಿಜ ವಾಗಿ ಚಾಮರಸನ ಮಹಾಭಾರತ ಶ್ರೇಷ್ಠವಾಗಿದ್ದಿತು. ಆದರೆ ಕುಹಕಿಗಳ ವೀರಶೈವ ಕವಿಯಾವ ಚಾಮರಸನಿಗೆ ಮನ್ನಣೆ ಸಿಗುತ್ತದೆ ಎಂಬ ಉದ್ದೇಶ ದಿಂದ ಆತನು ಮನೆಯಲ್ಲಿ ಇಲ್ಲದ ಸಮಯದಲ್ಲಿ ಮನೆಗೆ ಬೆಂಕಿ ಹಚ್ಚಿದರು. ಇದರ ಪ್ರಯುಕ್ತವಾಗಿ ಕುಮಾರವ್ಯಾಸನು ಮಹಾಭಾರತಕ್ಕೆ ಮನ್ನಣೆ ದೊರ ಕಲಿಲ್ಲ. ಚಾಮರಸನು ಜೀವನದಲ್ಲಿ ನಿರಾಶೆಹೊಂದಿ ಆತ್ಮಹತ್ಯ ಮಾಡಿ ಕೊಳ್ಳಲು ನದಿಯ ಹತ್ತಿರ ಬಂದಾಗ ಪಂಪಾ ವಿರೂಪಾಕ್ಷನ ಅಭಯವಾಣಿ ಕೇಳಿಬಂದಿತು. ಚಾಮರಸನು ವೀರಶೈವ ಕವಿಯಾದದ್ದರಿಂದ ಪ್ರಭುಲಿಂಗ ಲೀಲೆಯ ಮೇಲೆ ಕಾವ್ಯವನ್ನು ಏಕೆ ಬರೆಯಬಾರದೆಂದು ವಿರೂಪಾಕ್ಷನ ಆಜ್ಞಾಪಿಸಿದನು. ಅಂತೆಯೇ ಚಾಮರಸನು ಪ್ರಭುಲಿಂಗಲೀಲೆಯನ್ನು ಬರೆದು ಆದನ್ನು ಆಸ್ಥಾನದಲ್ಲಿರಿಸಿದನು ಆದನ್ನು ಓದಿ ರಾಜನು ಆನಂದಭರಿತನಾದನೇ ಚಾಮರಸನಿಗೆ ಸನ್ಮಾನ ಮಾಡಿದನು. ಉಳಿದ ವೀರಶೈವಗೆ ಉನ್ನತ ಹುದ್ದೆ ಯನ್ನು ದಯಪಾಲಿಸಿದನು. ಉದಾ:-ಜಕಣಾಚಾರ್ಯ ಪ್ರಧಾನಮಂತ್ರಿ ಯಾದನು. ಲಕ್ಕಣ್ಣ ದಂಡೇಶ ಸೈನ್ಯಾಧಿಕಾರಿಯಾದನು. ವೀರಶೈವರಿಗೆ ಅತ್ಯಂತ ಪ್ರೋತ್ಸಾಹ ನೀಡಿದನು.

ಅನೇಕ ಕಟ್ಟಡಗಳನ್ನು ಈತನು ಕಟ್ಟಿಸಿದ್ದಾನೆ. ದಕ್ಷಿಣ ರಾಜ್ಯದಲ್ಲಿ ರುವ ಉತ್ತರ ಆರ್ಕಾಟ ಜಿಲ್ಲೆಯಲ್ಲಿರುವ ತಿರುವನ್ನಾಮಲೈ ಗೋಪುರವನ್ನು ಈತನೇ ಕಟ್ಟಿಸಿದ್ದಾನೆ. ಈ ಗೋಪುರವು ೨೧೭ ಫೂಟು ಎತ್ತರ ವಿರುತ್ತದೆ.

ಮಧುರೆಯ ಮೀನಾಕ್ಷಿದೇವಿಯ ಮೂಗಿನ ಮೇಲೆ ಇರುವ ಆಭರಣವು ಪ್ರೌಢ ದೇವರಾಯನಿಂದಲೇ ಕಾಣಿಕೆಯಾಗಿ ಕೊಟ್ಟಿತ್ತು. ಈತನ ಆಳಿಕೆಯಲ್ಲಿಯ ಶಾಂತಿ ಮತ್ತು ಸುವ್ಯವಸ್ಥೆಯ ಆಡಳಿತವನ್ನು ಮುಂದೆ ಶ್ರೀ ಕೃಷ್ಣದೇವ ರಾಯನ ವರೆಗೆ ಯಾರೂಮಾಡಲಿಲ್ಲವೆಂದು ಹೇಳಬಹುದು.

## ಲಕ್ಕಣ್ಣ ದಂಡೇಶ

ಪ್ರೌಢದೇವರಾಯನ ಕಾಲದಲ್ಲಿ ಲಕ್ಕಣ್ಣ ದಂಡೇಶನು ಸೈನ್ಯದ ಮುಖ್ಯಾಧಿಕಾರಿಯಾಗಿದ್ದನು. ಮತ್ತು ರಾಜನಿಗೆ ಮುಖ್ಯ ಸಲಹೆಗಾರನಾಗಿ ದ್ದನು. ರಾಜನಿಗೆ ಯೋಗ್ಯವಾದ ಸಲಹೆ ಸೂಚನೆ ಅಭಿಪ್ರಾಯಗಳನ್ನು ಕೊಡುವದು ಲಕ್ಕಣ್ಣನ ಕಾರ್ಯ. ಈತನು ಪ್ರಾಮಾಣಿಕ ಮನುಷ್ಯನು. ರಾಜಕೀಯ ವ್ಯವಹಾರಗಳನ್ನು ಈತನು ನಿರ್ವಹಿಸುತ್ತಿದ್ದನು.

ಅಂದಿನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ೭೭೭ ವೀರಶೈವ ಮಠದಳಿದ್ದವು. ಈ ಮಠಗಳ ಮೇಲ್ವಿಚಾರಣೆಯನ್ನು ಲಕ್ಕಣ್ಣನ ತಮ್ಮನಾದ ಜಕ್ಕಣಾಚಾರ್ಯನು ನೋಡಿಕೊಳ್ಳುತ್ತಿದ್ದನು ಜಕ್ಕಣಾಚಾರ್ಯನು ಪ್ರಧಾನ ಮಂತ್ರಿಯಾಗಿದ್ದನು. ಲಕ್ಕಣ್ಣ ದಂಡೇಶನ ಮನೆತನ ವೀರಶೈವ ಮನೆತನ. ಶಿವಭಕ್ತರು. ಲಕ್ಕಣ್ಣ ದಂಡೇಶ ಬಸಪ್ಪ ವಡೆಯರ, ಶಾಂತರಸ ಮತ್ತು ಸೋಮರಸ ಇವರೆಲ್ಲರೂ ಉನ್ನತ ಹುದ್ದೆಗಳಲ್ಲಿಯೇ ಇದ್ದರು.

ಆ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಅನೇಕ ವೈರಿಗಳಿದ್ದರು. ರಾಜನ ಜೀವನಕ್ಕೆ ಅಪಾಯ ತರುವ ಘಟನೆಗಳೂ ನಡೆದವು. ಅಂತಹ ಒಂದು ಭಯಂಕರ ಘಟನೆ ಲಕ್ಕಣ್ಣನಿಲ್ಲದಾಗ ನಡೆಯಿತು. ಲಕ್ಕಣ್ಣನು ಲಂಕೆಗೆ ಮುತ್ತಿಗೆ ಹಾಕಲು ಹೋದಾಗ ರಾಜನ ತಮ್ಮನು ಮತ್ತು ತಮ್ಮನ ಅನು ಯಾಯಿಗಳು ರಾಜನನ್ನು ಕೊಲ್ಲಬೇಕೆಂದು ಒಳಸಂಚು ಮಾಡಿದರು. ಆನೆ ಗುಂದಿಯ ಹೊಸ ಅರಮನೆಯ ಪ್ರವೇಶದ ದಿನದಂದು ತಮ್ಮ ಕಾರ್ಯವನ್ನು ಸಾಧಿಸಬೇಕೆಂದು ಯೋಜನೆ ಹಾಕಿಕೊಂಡರು. ರಾಜನ ತಮ್ಮನಾದ ವೀರ ಪ್ರತಾಪರಾಯನು ಆನೆಗುಂದಿಯ ಹೊಸ ಅರಮನೆಯನ್ನು ಕಟ್ಟಿಸಿದ್ದನು. ಎಲ್ಲ

ಪ್ರಮುಖರನ್ನು ರಾಜನನ್ನು ಮಂತ್ರಿಗಳನ್ನು ಕರೆದಿದ್ದನು. ಪ್ರವೇಶದ್ವಾರದಲ್ಲಿ ವಿದ್ಯಾರಣ್ಯರ ಶ್ರೀ ಭುವನೇಶ್ವರಿಯ ವಿಗ್ರಹಗಳು ಇದ್ದವು. ಮೊದಲು ವಿಗ್ರಹಕ್ಕೆ ಒಬ್ಬರ ನಂತರ ಒಬ್ಬರು ನಮಸ್ಕರಿಸಿ ಒಳಗೆ ಪ್ರವೇಶಿಸಬೇಕು ಮುಂದೆ ಒಳಗಿನ ದಾರಿಯಲ್ಲಿ ಒಂದು ಕತ್ತಲೆಯ ಕೋಣೆಯಲ್ಲಿ ನಾಲ್ಕು ಜನ ಕೊಲೆಗಡಕರು ನಿಂತಿದ್ದರು. ಅವರ ಕೆಲಸ ಬಂದವರನ್ನೆಲ್ಲ ಕೊಲ್ಲುವದು. ನಂತರ ಹೆಣಗಳನ್ನು ಬದಿಯಲ್ಲಿದ್ದ ತಗ್ಗಿನಲ್ಲಿ ಹಾಕುವದು. ಈ ಪ್ರಕಾರವಾಗಿ ಎಷ್ಟೋ ಮಂದಿ ಪ್ರಮುಖ ಜನರು ಕೊಲ್ಲಲ್ಪಟ್ಟರು. ಸುದೈವವಶಾತ್ ರಾಜನು ಮತ್ತು ಜಕ್ಕಣಾಚಾರ್ಯನು ಪಾರಾದರು. ಜಕ್ಕಣಾಚಾರ್ಯ ಶಿವಶರಣರ ಪರಿಷತ್ತಿನಲ್ಲಿ ಭಾಗವಹಿಸಿದ್ದನು. ರಾಜನಿಗೆ ಮೈಯಲ್ಲಿ ಅಸ್ವಾಸ್ಥ್ಯ ತೋರಿದ್ದರಿಂದ ಅಲ್ಲಿಗೆ ಹೋಗಲಿಲ್ಲ. ಈ ಎಲ್ಲ ಸಂಗತಿ ಲಂಕೆಯಲ್ಲಿರುವ ದಂಡೇಶನಿಗೆ ಗುಪ್ತಚಾರರಿಂದ ತಿಳಿಯಿತು. ಕೂಡಲೆ ದಂಡೇಶನು ರಾಜ್ಯಧಾನಿಗೆ ಹಿಂದಿರುಗಿ ಬರುವಷ್ಟರಲ್ಲಿ ವೀರಪ್ರತಾಪರಾಯನು ಗಾಢವಾಗಿ ಮಲಗಿ ನಿದ್ರಿಸತ್ತಿದ್ದ ಪ್ರೌಢದೇವರಾಯನನ್ನು ಚೂರಿಯಿಂದ ಇರಿದು ರಕ್ತರಂಜಿತವಾಗಿ ಹೊರಗೆ ಬಂದು ಹುಚ್ಚನಂತೆ ನಾನೇ ಇನ್ನು ರಾಜನು. ನಿಮ್ಮ ಪ್ರೌಢದೇವರಾಯನು ತೀರಿದನು. ಲಕ್ಕಣ್ಣ ದಂಡೇಶ ಬಂದರೆ ಅವನನ್ನೂ ಮುಗಿಸುವೆ ಎಂದು ಆವೇಶದಿಂದ ಕೂಗಾಡಹತ್ತಿದ್ದನು. ಅರಮನೆಯು ತುಂಬ ಹುಚ್ಚನಂತೆ ನಗುತ್ತ ತಿರುಗಾಡ ಹತ್ತಿದ್ದನು. ಅಷ್ಟರಲ್ಲಿ ಲಕ್ಕಣ್ಣನು ತಪ್ಪಿಸಿಕೊಂಡು ಪ್ರೌಢದೇವರಾಯನ ಕೊಠಡಿಗೆ ಬಂದು ನೋಡಿದಾಗ ರಾಜನ ದೇಹ ರಕ್ತದ ನಡುವೆ! ಆದರೆ ರಾಜನು ಜೀವಂತವಿದ್ದನು. ಆದರೆ ಪ್ರಜ್ಞಾಹೀನನಾಗಿದ್ದನು. ಕತ್ತಿಯನ್ನು ಬಲಗೈಗೆ ಹಾಕಿದ್ದರಿಂದ ಜೀವಕ್ಕೆ ಅಪಾಯವಾಗಿದ್ದಿಲ್ಲ. ಕೂಡಲೇ ಲಕ್ಕಣ್ಣನ ಸೈನಿಕರು ವೀರಪ್ರತಾಪರಾಯನನ್ನು ಬಂಧಿಸಿದರು. ಕೆಲವು ದಿನದ ನಂತರ ದೇವರಾಯನು ಚೇತರಿಸಿದನು. ದೇವರಾಯನು ಸ್ವತಃ ಶಿವಭಕ್ತನು.

ಲಕ್ಕಣ್ಣ ದಂಡೇಶನು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನು. ಅವನಿಗೆ ಅನೇಕ ಬಿರುದುಗಳಿದ್ದವು. ಆದರೂ ಅವನಿಗೆ ಗರ್ವವಿದ್ದಿಲ್ಲ. ಅವನು "ಶಿವತತ್ವ ಚಿಂತಾಮಣಿ" ಎಂಬ ಗ್ರಂಥವನ್ನು ಬರೆದಿದ್ದಾನೆ. ರಾಜನಿಂದ ಪ್ರೋತ್ಸಾಹಗೊಂಡ ಲಕ್ಕಣ್ಣನು ನಿಜವಾದ ವೀರಶೈವನು.

# ಶ್ರೀ ಕೃಷ್ಣದೇವರಾಯನ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯ

ಪ್ರಸ್ತಾವನೆ— ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಅತ್ಯುನ್ನತ ಶಿಖರಕ್ಕೇರಿದ್ದಿತು. ಶ್ರೀ ಕೃಷ್ಣದೇವರಾಯನು ೧೫೦೯ ರಿಂದ ೧೫೨೯ರ ವರೆಗೆ ಅಂದರೆ ಇಪ್ಪತ್ತು ವರ್ಷಗಳ ಕಾಲ ಆಳಿದನು. ಆತನ ಕಾಲದಲ್ಲಿ ಸಾಮ್ರಾಜ್ಯವು ಸಂಪದ್ಭರಿತವಾಗಿತ್ತು. ಅದೇ ಕಾಲದಲ್ಲಿ ಇಂಗ್ಲಂಡ ದೇಶದಲ್ಲಿ ಹೆನ್ರಿ ಎಂಟನೆಯವನು ಆಳುತ್ತಿದ್ದನು. ಶ್ರೀ ಕೃಷ್ಣದೇವ ರಾಯನು ತುಳುವ ಮನೆತನಕ್ಕೆ ಸೇರಿದವನು. ಪ್ರಜಾರಕ್ಷಕನಾದ ರಾಜನು ತನ್ನ ಆಳಿಕೆಯಲ್ಲಿ ರಾಜ್ಯದಲ್ಲಿ ಶಾಂತಿಯನ್ನು ನೆಲೆಸಿದ್ದನು. ಸರ್ವಧರ್ಮ ಸಮನ್ವಯವನ್ನು ಕಾಯ್ದುಕೊಂಡು ಹೋಗಿದ್ದನು. ಎಲ್ಲ ಭಾಷಾ ಶಾಸ್ತ್ರಜ್ಞ ರಿಗೆ ಆಸ್ಥಾನದಲ್ಲಿ ಆಶ್ರಯವನ್ನಿತ್ತಿದ್ದನು. ಈತನ ಮಂತ್ರಿಯಾದ ತಿಮ್ಮರಸು ಅಥವಾ ಅಪ್ಪಾಜಿಯವರ ಹೆಸರು ಈಗಿನ ಕಾಲದಲ್ಲಿ ಮನೆಮಾತಾಗಿತ್ತು. ಸಾಮ್ರಾಜ್ಯದ ಎಲ್ಲ ಭಾಗಗಳಿಂದ ಆತನ ಮಂತ್ರಿಗಳು ಇದ್ದರು.

ಕೃಷ್ಣದೇವರಾಯನು ಮೊದಲರ್ಧ ಆಳಿಕೆಯನ್ನು ಸಾಮ್ರಾಜ್ಯವನ್ನು ಕಟ್ಟುವದರಲ್ಲಿ ತೊಡಗಿಸಿದನು. ಉಳಿದರ್ಧ ಆಳಿಕೆಯಲ್ಲಿ ಸಾಮ್ರಾಜ್ಯದಲ್ಲಿ ಶಾಂತಿ ಅಭ್ಯುದಯ ಕಲೆ ಕೈಗಾರಿಕೆ ಸಾಹಿತ್ಯಗಳಿಗೆ ಪ್ರೋತ್ಸಾಹ ಕೊಡು ವದು ಮುಂತಾದ ಚಟುವಟಿಕೆಗಳಲ್ಲಿ ತೊಡಗಿದನು

೧ ರಾಜ್ಯದ ವಿಸ್ತೀರ್ಣ ಬಿಜಾಪುರ ಸುಲ್ತಾನನ ಕೈಯಲ್ಲಿ ರಾಯ ಚೂರ ವಶವಾದದ್ದು ಮತ್ತು ಓಡಿಸಾದ ಗಜಪತಿಯ ಒಪ್ಪಂದ ಮುಸಲ್ಮಾನರ ಸಂಗಡ ಆದುದನ್ನು ನೋಡಿ ವಿಜಯನಗರ ಸಾಮ್ರಾಜ್ಯದ ವಿಸ್ತೀ ರ್ಣಕ್ಕೆ ಧಕ್ಕೆ ಬರುವದೆಂದು ಉದ್ದೇಶಿಸಿ ಅವರಿಬ್ಬರನ್ನು ಹತ್ತಿಕ್ಕಲು ತಯಾರಿ ಯನ್ನು ನಡೆಸಿದನು.

೩ ಮೊದಲ ವಿಜಯ—ಶ್ರೀ ಕೃಷ್ಣದೇವರಾಯನ ಮೊದಲ ವಿಜಯವು ೧೫೧೧ ರಲ್ಲಿ ಉಮ್ಮತ್ತೂರದ ಗಂಗರಾಜನನ್ನು ಸೋಲಿಸಿ ಆತನ ರಾಜಧಾನಿ

ಯಾದ ಶಿವಸಮುದ್ರವನ್ನು ಗೆದ್ದನು. ಗಂಗಾರಾಜನು ಕಾವೇರಿ ನದಿಯಲ್ಲಿ ಬಿದ್ದು ಆತ್ಮಹತ್ಯ ಮಾಡಿಕೊಂಡನು. ಚಿಕ್ಕರಾಯನನ್ನು ಒಂದು ಕೋಟಿ ರೂ ವರ್ಷಕ್ಕೆ ಕಾಣಿಕೆಯಾಗಿ ಕೊಡಬೇಕೆಂದು ಒಪ್ಪಿಸಿ ಅಲ್ಲಿಗೆ ಕಳುಹಿಸಿದನು.

೪ ಎರಡನೆಯ ವಿಜಯ....೧೫೧೩ ರಲ್ಲಿ ಶ್ರೀ ಕೃಷ್ಣದೇವರಾಯನು ಪೂರ್ವದ ಕರಾವಳಿ ದಡಕ್ಕೆ ಬಂದನು. ದಿಗ್ವಿಜಯಕ್ಕೆ ಹೊರಟನು. ಉದಯ ಗಿರಿಗೆ ಗಜಪತಿಯನ್ನು ಸೋಲಿಸಲು ರಾಜನು ಹೊರಟನು. ಪ್ರತಾಪರುದ್ರ ಗಜಪತಿಯು ಮಹಮ್ಮದಿಯರ ಸಂಗಡ ಒಪ್ಪಂದವನ್ನು ಮಾಡಿಕೊಂಡ. ಕಳಿಂಗ ದೇಶವನ್ನು ಸಂಪೂರ್ಣವಾಗಿ ಸ್ವಾಧೀನದಲ್ಲಿರಿಸಿಕೊಂಡು ಪುರಿಯಿಂದ ಕಾಳಹಸ್ತಿಯವರೆಗೆ ರಾಜ್ಯವನ್ನು ವಿಸ್ತರಿಸಿದ್ದನು. ಅರಸನಿಗೆ ೩೦,೦೦೦ ಕಾಲ್ದಳಗಳೂ ೮೦೦೦ ಆನೆಗಳು ೧೧,೦೦೦ ಅಶ್ವಗಳು ಇದ್ದವು. ಈ ಅಪಾರ ಸೇನಾ ಸಮೂಹದಿಂದ ಶ್ರೀ ಕೃಷ್ಣದೇವರಾಯನು ೧೮ ತಿಂಗಳು ಸತತವಾಗಿ ಮುತ್ತಿಗೆ ಹಾಕಿದನು ಈ ಪ್ರಯತ್ನದಲ್ಲಿ ರಾಜನಿಗೆ ಆರವೀಡು, ತೊರುಗಲ್ಲು, ಗೊಬ್ಬೂರು ನಂದ್ಯಾಲ, ಔಗವೇಲುಗೋಡು ಮತ್ತು ರೇವಲು ತುಳುವ ಮುಖ್ಯಸ್ಥರು ಸಹಾಯಮಾಡಿದರು.

ಗಜಪತಿಯು ತನ್ನ ಮಗಳಾದ ಚಿನ್ನಾಂಬೆಯನ್ನು ಶ್ರೀ ಕೃಷ್ಣದೇವ ರಾಯನಿಗೆ ಕೊಟ್ಟು ಮದುವೆ ಮಾಡಿ ಆತನೊಡನೆ ಶಾಂತಿ ಒಪ್ಪಂದವನ್ನು ಮಾಡಿಕೊಂಡು ಸಂಬಂಧವನ್ನು ಬೆಳೆಸಿದನು. ಶ್ರೀ ಕೃಷ್ಣದೇವರಾಯನು ತಿರುಗಿ ಬರುವಾಗ ತಿರುಪತಿ ದೇವಸ್ಥಾನಕ್ಕೆ ದರ್ಶನವಿತ್ತನು. ಈಗಲೂ ಅಲ್ಲಿ ರಾಯನ ಮತ್ತು ಇಬ್ಬರು ಪತ್ನಿಯರ ಪ್ರತಿಮೆಗಳು ಇರುತ್ತವೆ. ಉದಯಗಿರಿಯಿಂದ ರಾಜನು ಶ್ರೀ ಬಾಲಕೃಷ್ಣಸ್ವಾಮಿಯ ಪ್ರತಿಮೆಯನ್ನು ತೆಗೆದುಕೊಂಡು ಬಂದು ಹಂಪಿಯಲ್ಲಿಯ ಕೃಷ್ಣಸ್ವಾಮಿಯ ಗುಡಿಯಲ್ಲಿ ಪ್ರತಿಷ್ಠಾಪಿಸಿದನು. ಈಗ ಆ ಗುಡಿಯು ಹಾಳಾದುದರಿಂದ ಈ ಪ್ರತಿಮೆಯ ಮುದ್ರಿತ ಚಿತ್ರ ಮದ್ರಾಸ ವಸ್ತುಸಂಗ್ರಹಾಲಯದಲ್ಲಿರುತ್ತದೆ.

೫ ಮೂರನೇ ವಿಜಯ—ನಂತರ ರಾಜನು ೧೫೧೫ರಲ್ಲಿ ಗಜಪತಿಯ ಮಗನಾದ ವೀರಭದ್ರನ ರಾಜ್ಯವಾದ ಕೊಂಡವಿಡಿಗೆ ದಾಳಿಯಿಟ್ಟನು.

ಕೊಂಡವೀಡು ಈಗ ಗುಂಟೂರ ಜಿಲ್ಹೆಯಲ್ಲಿದೆ. ಕೊಂಡವೀಡು ಗೆದ್ದ ನಂತರ ಸಣ್ಣ ಪ್ರಾಂತಗಳಾದ ಕಂಡುಕುರ, ವಿನುಕೊಂಡು, ಪಲ್ನಾಡ ಮುಂತಾದವು ಗಳನ್ನು ಗೆದ್ದನು. ನಂತರ ಕೊಂಡಪಲ್ಲಿಯನ್ನು ಸಹ ಗೆದ್ದನು. ಹಿಂದಿರುಗಿ ರಾಜಧಾನಿಗೆ ಬರುವ ದಾರಿಯಲ್ಲಿ ಅಮರಾವತಿಯಲ್ಲಿ ಅಮರೇಶ್ವರ ಗುಹೆಯನ್ನು ಸಂದರ್ಶಿದನು. ತನ್ನ ಇಬ್ಬರು ರಾಣಿಯರೊಂದಿಗೆ ರಾಯನು ಮುಂದೆ ಶ್ರೀ ಶೈಲಕ್ಕೆ ಹೋಗಿ ಅಲ್ಲಿ ಮಂಟಪಗಳನ್ನು ಕಟ್ಟಿಸಿದ್ದಾನೆ.

೪ ನಾಲ್ಕನೆಯ ವಿಜಯ—ನಂತರ ರಾಯನು ೬೦-೩-೧೫೧೭ ರಲ್ಲಿ ಗಜಪತಿಯ ರಾಜ್ಯವಾದ ಕಳಿಂಗಕ್ಕೆ ದಾಳಿಮಾಡಲು ನಿರ್ಧರಿಸಿದನು. ಆಸ್ಥಾನ ಕವಿ ಪೆದ್ದಣ್ಣನು ರಾಜನು ಯಾವ ರೀತಿ ದಿಗ್ವಿಜಯಕ್ಕೆ ಸಾಗಿದನೆಂದು ವಿವರಿಸಿದ್ದಾನೆ. ಪೊಣ್ಣಾನೂರಿನಲ್ಲಿ ವಿಜಯದ ಸ್ತಂಭವನ್ನು ನೆಟ್ಟಿದ್ದಾನೆಂದು ವರ್ಣಿಸಿದ್ದಾನೆ. ಸಿಂಹಾಚಲದ ಶಿಲಾಶಾಸನೆಯ ಪ್ರಕಾರ ರಾಜನು ತನ್ನ ಇಬ್ಬರು ರಾಣಿಯರೊಂದಿಗೆ ಉದಯಗಿರಿ ವಿನುಕೊಂಡ, ಬೆಲ್ಲಮಕೊಂಡ, ನಾಗಾರ್ಜುನ ಕೊಂಡ, ಕೊಂಡವೀಡು, ಕೊಂಡಪಲ್ಲಿ ಮುಂತಾದವುಗಳನ್ನು ಗೆದ್ದುಕೊಂಡು ಸಿಂಹಾಚಲಂಕ್ಕೆ ಭೆಟ್ಟಿಕೊಟ್ಟು ವರಾಹ ನರಸಿಂಹ ದೇವರಿಗೆ ಬೃಹತ್ತ ಕಾಣಿಕೆಗಳನ್ನು ಸಮರ್ಪಿಸಿದನು. ಹಿಂದಿರುಗಿ ಬರುವಾಗ ವಿಜಯವಾಡಕ್ಕೆ ಭೆಟ್ಟಿ ಕೊಟ್ಟು ಅಲ್ಲಿರುವ ಶ್ರೀ ಆಂಧ್ರ ವಿಷ್ಣು ದೇವರ ದರ್ಶನವನ್ನು ತೆಗೆದುಕೊಂಡನು.

೫ ಐದನೆಯ ವಿಜಯ—ರಾಯನ ಮುಂದಿನ ವಿಜಯ ತುಳುರಾಜ್ಯದಲ್ಲಿ ೧೩-೭-೧೫೧೮ರಲ್ಲಿ ಮಂಗಳೂರಲ್ಲಿಯ ತುಳು ರಾಜ್ಯಕ್ಕೆಸಾಗಿಅತ್ಯಂತಯಶಸ್ವೀ ರೀತಿಯಾಗಿ ವಿಜಯವನ್ನು ಸಂಪಾದಿಸಿದನು.

೬ ಆರನೆಯ ವಿಜಯ:ವು ರಾಯಚೂರ್ಡಕೋಟೆ—ಶ್ರೀ ಕೃಷ್ಣದೇವ ರಾಯನು ದಕ್ಷಿಣಭಾರತದ ಉದ್ದಗಲಕ್ಕೂ ಸಾಮ್ರಾಜ್ಯವನ್ನು ವಿಸ್ತರಿಸಿದನು. ಆದರೂ ಅತನ ಮನಕ್ಕೆ ಶಾಂತಿ ಎಂಬುದು ಇದ್ದಿಲ್ಲ. ರಾಯಚೂರು ಮುದಗಲ್ಲ ಕೋಟೆಗಳನ್ನು ಈ ಮೊದಲು ವಿಜಯನಗರದ ಕೈಯಲ್ಲಿದ್ದವು. ಆದರೆ ಈಗ ಅವು ಮುಸಲ್ಮಾನರ ಕೈಯಲ್ಲಿದ್ದವು. ರಾಯನು ತನ್ನ ತಂದೆಗೆ

ತನ್ನ ಜೀವವಿರುವಷ್ಟರಲ್ಲಿ ಆ ಎರಡೂ ಕೋಟೆಗಳನ್ನು ವಶಪಡಿಸಿಕೊಳ್ಳುವೆನೆಂದು ಆಶ್ವಾಸನವಿತ್ತಿದ್ದನು. ಈಗ ಅವುಗಳನ್ನು ಹೇಗೆ ವಶಪಡಿಸಿಕೊಳ್ಳಬೇಕೆಂದು ಸದಾ ಯೋಚಿಸುತ್ತಿದ್ದನು. ಈಗ ಅವೆರಡೂ ಬಿಜಾಪುರದ ಸುಲ್ತಾನನ ವಶದಲ್ಲಿದ್ದವು. ಅವರಿಬ್ಬರ ನಡುವೆ ವಿರಸ ಬೆಳೆಯುವ ಕಾರಣದ ಅವಕಾಶವನ್ನು ಕಾಯುತ್ತಿದ್ದನು. ಅಂಥ ಅವಕಾಶ ಈ ರೀತಿ ಒದಗಿತು.

ವಿಜಯನಗರದ ರಾಜನು ಒಬ್ಬ ಮುಸ್ಲಿಮ ಸರದಾರನನ್ನು ಗೋವೆಯಿಂದ ಕುದುರೆಗಳನ್ನು ತೆಗೆದುಕೊಂಡು ಬರಬೇಕೆಂದು ನಿಯಮಿಸಿ ಕಳಿಸಿದನು. ಕುದುರೆಗಳ ವ್ಯಾಪಾರದಲ್ಲಿ ನಿಷ್ಣಾತನಾಗಿದ್ದ ಆ ಸರದಾರನ ಹೆಸರು ಅಸದಖಾನ ಎಂದು ಅದಕ್ಕೆ ಅವನಿಗೆ ೧೪ ಲಕ್ಷ ಸಾವರಿನ್ ನಾಣ್ಯಗಳನ್ನು ಕೊಡಲಾಯಿತು. ಆದರೆ ಆ ಎಲ್ಲ ದ್ರವ್ಯವನ್ನು ತೆಗೆದುಕೊಂಡು ಅಸದಖಾನನು ಬಿಜಾಪುರದ ಸುಲ್ತಾನನ ಆಶ್ರಯದಲ್ಲಿ ಸುಖವಾಗಿರಹತ್ತಿದನು. ರಾಯನು ತಿಳಿಸಿದ ಪ್ರಕಾರ ಗೋವೆಯಲ್ಲಿ ಅಧಿಕಾರಿಗಳು ೩ ತಿಂಗಳು ಖಾನನ ದಾರಿ ಕಾಯ್ದರು. ನಂತರ ವಿಜಯನಗರಕ್ಕೆ ಅಲ್ಲಿ ಯಾರೂ ಬಂದಿಲ್ಲವೆಂದು ಸುದ್ದಿಯನ್ನು ಕಳಿಸಿದರು. ಅಷ್ಟರಲ್ಲಿ ಅಸದಖಾನನು ಬಿಜಾಪುರದಲ್ಲಿರುವನೆಂದು ತಿಳಿದು ಬಂದಿತು. ಇದು ಸುಲ್ತಾನನ ಕೆಲಸವೆಂದೇ ಭಾವಿಸಿ ಅವನ ವಿರುದ್ಧ ಯುದ್ಧದ ತಯಾರಿಯನ್ನು ರಾಯನು ನಡೆಸಿದನು. ಆ ಪ್ರಕಾರ ಹತ್ತು ಲಕ್ಷ ಸೈನ್ಯವನ್ನು ತೆಗೆದುಕೊಂಡು ರಾಯಚೂರ ಕೋಟೆಗೆ ಮುತ್ತಿಗೆ ಹಾಕಿದನು. ಒಮ್ಮಿಂದೊಮ್ಮೆಗೆ ಬಂದ ದಾಳಿಯಿಂದ ಸುಲ್ತಾನನು ಆಘಾತಗೊಂಡನು. ವಿಜಯನಗರದ ಸೈನ್ಯವು ರಾಯಚೂರ ಅಧೋನಿಯಲ್ಲಿ ಬೀಡುಬಿಟ್ಟಿತು. ಸುಲ್ತಾನನು ಕೋಟೆಗಳ ರಕ್ಷಣೆಗೆ ಸಾಗಿದನು. ಆದರೆ ವಿಫಲವಾದನು. ಕೃಷ್ಣಾನದಿಯ ದಂಡೆಯ ಮೇಲೆ ಉಭಯ ಸೈನ್ಯಗಳು ಸಂಧಿಸಿದವು. ಭೀಕರ ಕದನವಾಯಿತು. ಸ್ವತಃ ರಾಯನು ಯುದ್ಧರಂಗದಲ್ಲಿ ಮುಂದೆ ನಿಂತು ಕಾದಾಡಿದನು. ಆಗ ಸುಲ್ತಾನನೂ ಬಂದು ನಿಂತನು. ಉಭಯ ರಾಜರಿಗೂ ಭೀಕರ ಕದನವಾಯಿತು. ಆದರೆ ಅಲಿ ಆದಿಲಶಹನು ಸೋತು, ಓಡಿ ಹೋಗಲು ಪ್ರಯತ್ನಿಸಿದನು. ಆದರೆ ಆತನ ಬಲಗೈ, ಬಲಗಾಲು ಭೀಕರವಾದ ಗಾಯಗಳಾದ್ದರಿಂದ ಅವನಿಗೆ ಓಡಿ ಹೋಗಲು ಸಾಧ್ಯವಾಗಲಿಲ್ಲ. ಸುಲ್ತಾನನ ದುಃಸ್ಥಿತಿ

ಯನ್ನು ನೋಡಿ ಶ್ರೀ ಕೃಷ್ಣದೇವರಾಯನು ಆತನನ್ನು ಕ್ಷಮಿಸಿ ಬಿಜಾಪುರಕ್ಕೆ ಹಿಂದಿರುಗಿ ಹೋಗಲು ಹೇಳಿದನು. ಬಿಜಾರದ ಆಳಿದುಳಿದ ಸೈನ್ಯವನ್ನು ಶ್ರೀ ಕೃಷ್ಣದೇವರಾಯನು ಸೆರೆಯಲ್ಲಿ ಹಿಡಿದಿಟ್ಟನು. ಬಿಜಾಪುರದ ಆಸ್ತಿಯನ್ನು ಸೈನ್ಯ ಸಂಪತ್ತನ್ನು ಶ್ರೀ ಕೃಷ್ಣದೇವರಾಯನು ತೆಗೆದುಕೊಂಡನು. ರಾಯಚೂರ ಮುದಗಲ್ಲ ಕೋಟೆಗಳಿಗೆ ಗೋವಿಂದರಾಜ, ಕೊಂಡಮಾರಸಯ್ಯ ರನ್ನು ನಿಯಮಿಸಿದನು. ನಂತರ ಬಿಜಾಪುರಕ್ಕೆ ಸ್ವತಃ ಹೋಗಿ ದಾಳಿಯಿಟ್ಟನು. ಸುಲ್ತಾನನು ಶ್ರೀ ಕೃಷ್ಣದೇವರಾಯನ ಕಾಲಿಗೆ ಬಿದ್ದನು. ಲಕ್ಷಾಂತರ ಮುಸ ಲ್ಮಾನ ಸೈನಿಕರು ಹತರಾದರು. ರಾಯನ ಬಹುಕಾಲದ ಇಚ್ಛೆಯ ಪ್ರಕಾರ ಎರಡೂ ಕೋಟೆಗಳೂ ವಶವಾದವು. ಮುಂದೆ ಬಹಮನಿ, ಬೀದರ ಗೋವಳ ಕೊಂಡ ಮುಂತಾದ ಮುಸಲ್ಮಾನ ರಾಜರನ್ನು ಸೋಲಿಸಿದನು.

೯. ರಾಯನ ಸೈನ್ಯಸಂಪತ್ತು—೧೪೪೩ರಲ್ಲಿ ಅಬ್ದುಲ್ ರಝಾಕನು ಬರೆದ ಪ್ರಕಾರ ಹನ್ನೊಂದು ಲಕ್ಷ ಕಾಲ್ದಳಗಳೂ ಮತ್ತು ಒಂದು ಸಾವಿರ ಕ್ಕಿಂತ ಹೆಚ್ಚು ಆನೆಗಳಿದ್ದವೆಂದು ಹೇಳುತ್ತಾನೆ. ವಿಜಯನಗರ ರಾಜ್ಯದಲ್ಲಿಯೇ ತೊಂಭತ್ತುಸಾವಿರ ಶಸ್ತ್ರಸಜ್ಜಿತ ಜನರಿದ್ದರೆಂದು ಹೇಳುತ್ತಾನೆ. ರಾಯನು ತನ್ನ ಆದಾಯದ ಅರ್ಧಕ್ಕೂ ಮಿಕ್ಕಿ ಹಣವನ್ನು ಸೈನ್ಯಕ್ಕೆ ವೆಚ್ಚಮಾಡುತ್ತಿ ದ್ದನು. ರಾಜನು ತನ್ನ ಸ್ವಂತ ಸೈನ್ಯವನ್ನು ಇಟ್ಟುಕೊಂಡಿದ್ದನು. ಆತನಿಗೆ ೮೦೦ ಆನೆಗಳು, ೫೦೦ ಕುದುರೆಗಳು ಇದ್ದವು. ಅವುಗಳ ವೆಚ್ಚದ ಹಣವನ್ನು ವಿಜಯನಗರದ ಆದಾಯದಿಂದ ತೆಗೆದುಕೊಳ್ಳುತ್ತಿದ್ದನು.

ಪೋರ್ತುಗೀಸ ಪ್ರವಾಸಿ ಪಾಯಸ್‌ನ ಅಭಿಪ್ರಾಯದ ಪ್ರಕಾರ ರಾಯನು ಯಾವ ವೇಳೆಯಲ್ಲಿಯೂ ಯುದ್ಧವನ್ನು ಎದುರಿಸುವದಕ್ಕೆ ಸೈನ್ಯದ ಸಿದ್ಧತೆ ಯನ್ನು ಮಾಡಿಕೊಂಡಿದ್ದನು. ಒಂದು ಲಕ್ಷ ಕಾಲ್ದಳಗಳೂ, ಅದರಲ್ಲಿ ೩೫ ಸಾವಿರ ಶಸ್ತ್ರಸಜ್ಜಿತ ಅಶ್ವಗಳೂ ಇದ್ದವು. ಊರಲ್ಲಿಯ ಶ್ರೀಮಂತರಿಗೆ ಕುದುರೆ ಆನೆ, ಪದಾತಿಗಳನ್ನು ನಡೆಸಿಕೊಂಡು ಹೋಗಲು ಹೇಳಿದ್ದನು. ಅಂದರೆ, ತುರ್ತುಪರಿಸ್ಥಿತಿ ಉಂಟಾದಾಗ ಅವರ ಸಹಾಯವನ್ನು ತೆಗೆದುಕೊಳ್ಳಬಹು ದೆಂದು ಅವನ ಯೋಚನೆ. ಮಹಾಮಂತ್ರಿಯಾಗಿದ್ದ ತಿಮ್ಮರಸು ೩೦೦೦೦ ಕಾಲಾಳುಗಳನ್ನು, ೩೦೦೦ ಕುದುರೆಗಳನ್ನು, ೩೦ ಆನೆಗಳನ್ನು ರಕ್ಷಿಸುವದರ

ಸಲುವಾಗಿ ತನ್ನ ಆದಾಯದ ೧/೬ ಭಾಗವನ್ನು ವೆಚ್ಚಮಾಡುತ್ತಿದ್ದನು.

೧೦ ಸಾಮ್ರಾಜ್ಯದ ವಿಸ್ತೀರ್ಣ— ಅಬ್ದುಲ್ ರಝಾಕನ ವರ್ಣನೆಯ ಪ್ರಕಾರ ಶ್ರೀ ಕೃಷ್ಣದೇವರಾಯನ ವಿಜಯನಗರ ಸಾಮ್ರಾಜ್ಯವು ಈಗಿನ ಮದ್ರಾಸ ರಾಜ್ಯದಿಂದ ಮೈಸೂರ ರಾಜ್ಯದ ವರೆಗೆ ಇದ್ದಿತು. ಪೂರ್ವದ ಕಟಕದಿಂದ ಪಶ್ಚಿಮದ ಸಲಸಟ್ಟಿಯವರೆಗೆ ಇದ್ದಿತು. ಉತ್ತರದ ಕೃಷ್ಣಾನದಿಯಿಂದ ದಕ್ಷಿಣದ ಕೇಪಕಾಮರಿನದವರೆಗೆ ಆತನ ಸಾಮ್ರಾಜ್ಯದ ಗಡಿಯು. ಆತನ ಸಾಮ್ರಾಜ್ಯವು ಸಮುದ್ರ ತೀರಗಳನ್ನು ಹೊಂದಿದ್ದರಿಂದ ಪರದೇಶಗಳ ಕೂಡ ವ್ಯಾಪಾರವು ನಡೆಯುತ್ತಿತ್ತು ಶ್ರೀ ಕೃಷ್ಣದೇವರಾಯನ ಪ್ರದೇಶವು ರಾಯಲಸೀಮೆ, ಈಗಿನ ನಾಲ್ಕು ಜಿಲ್ಹೆಗಳನ್ನು ಒಳಗೊಂಡಿರುತ್ತದೆ. ಬಳ್ಳಾರಿ, ಅನಂತಪುರ, ಕುಡ್ಡಪ್ಪ ಮತ್ತು ಕರ್ನೂಲು ಚಿತ್ತೂರು. ರಾಯಲಸೀಮೆಯ ಹೆಸರಿನಲ್ಲಿ ಮಹಾಸಭಾ ಬ್ಯಾಂಕು, ಒಂದು ಮುದ್ರಣಾಲಯ, ಟೆಕ್ಸಟೈಲಮಿಲ್ ಶಾಖಾಹಾರಿ, ಉಣ್ಣೆ ಕಾರಖಾನೆಗಳು ಅನೇಕ ಕೈಗಾರಿಕೆ ಉದ್ಯಮಗಳು ಮತ್ತು ಬಳ್ಳಾರಿಯಲ್ಲಿ ಪೊಲಿ-ಟೆಕ್ನಿಕ್ ಶಾಲೆಯು ನಡೆಯುತ್ತವೆ.

೧೧ ಕೃಷ್ಣದೇವರಾಯನ ಕಟ್ಟಡಗಳು—ವಿಜಯನಗರ ಸಾಮ್ರಾಜ್ಯವನ್ನು ಅತಿ ಸುಂದರವಾಗಿ ನಿರ್ಮಿಸಿದ ಶ್ರೇಯಸ್ಸು ಶ್ರೀ ಕೃಷ್ಣದೇವರಾಯನಿಗೆ ಸೇರಿದ್ದು. ಈಗ ಬರಿದಾಗಿರುವ ರಾಯರಕೆರಿ ಅಂದಿನ ನೀರಿನ ಸಂಗ್ರಹವಾಗಿತ್ತು. ಇದಕ್ಕೆ ಪೋರ್ತುಗೀಜ ಶಿಲ್ಪಿಯು ಯೋಜನೆಯನ್ನು ಹಾಕಿಕೊಟ್ಟಿದ್ದನು. ಪಂಪಾಪತಿಯ ಪಶ್ಚಿಮದ ಬಾಗಿಲು, ಹಜಾರಿರಾಮನ ಗುಡಿ, ಉಗ್ರನರಸಿಂಹನ ಭವ್ಯಮೂರ್ತಿ ಮುಂತಾದವುಗಳನ್ನು ಕಟ್ಟಿಸಿದ್ದಾನೆ. ವಲ್ಲಭಪುರ ಆಣೆಕಟ್ಟು ತುಂಗಭದ್ರಾ ನದಿಯಿಂದ ೧೨ ಮೈಲು ಇರುತ್ತದೆ. ಇದರಿಂದ ಬಸವಣ್ಣ ಕಾಲುವೆಯು ಹರಿಯುತ್ತದೆ. ಸಿಂಹಾಸನಕ್ಕೆ ಬಂದನಂತರ ರಾಯನು ಶ್ರೀ ವಿರೂಪಾಕ್ಷ ದೇವಾಲಯದಲ್ಲಿ ರಾಯರ ಗೋಪುರವನ್ನು ಕಟ್ಟಿಸಿದನು. ವಿಜಯ ವಿಠ್ಠಲ ಗುಡಿಯನ್ನು ಈತನೇ ಕಟ್ಟಿಸಿದ್ದಾನೆ. ಪೆನುಗೊಂಡೆಯ ಕೋಟೆಯ ಹತ್ತಿರ ಗಗನ ಮಹಲನ್ನು ಕಟ್ಟಿಸಿದ್ದಾನೆ. ಈಗ ಅದು ಬೇಸಗೆಯಲ್ಲಿ ತಂಗುವ ಸ್ಥಳವಾಗಿದೆ. ಈಶ್ವರ ಗುಡಿಯನ್ನು ಗಾಳಿಯ ಗೋಪುರವನ್ನು, ಕಾಳಹಸ್ತಿಯಲ್ಲಿ ಕೆತ್ತನೆಯ ಕಂಬಗಳೂ ಉತ್ತರದ

ನಟರಾಜ ಸ್ವಾಮೀಜಿ, ಚಿದಂಬರದಲ್ಲಿ ಬಾಗಿಲಲ್ಲಿ ಸಿಂಹವನ್ನು ಕಟ್ಟಿಡಿದ್ದ, ತಿರುಪತಿಯಲ್ಲಿ ಹನ್ನೊಂದು ಅಂತಸ್ತಿನ ಗೋಪುರವು, ಶ್ರೀಶೈಲದಲ್ಲಿ ಮಂಟಪ ಗಳ ಸಾಲುಗಳು ಮತ್ತು ಬೃಹತ್ರಥ ಮುಂತಾದವುಗಳನ್ನು ಕಟ್ಟಿಸಿದ ಶ್ರೇಯಸ್ಸು ಶ್ರೀ ಕೃಷ್ಣದೇವರಾಯನದು: ಹಲವಾರು ದೇವಾಲಯಗಳಿಗೆ ಆಸ್ತಿಯನು ಭೂಮಿಯನ್ನು ದೇಣಿಗೆಯಾಗಿ ಕೊಟ್ಟಿದ್ದಾನೆ.

೧೨ ರಾಯನ ಆಸ್ಥಾನದಲ್ಲಿಯ ಪ್ರಸಿದ್ಧ ಕವಿಗಳು—

ವಿಜಯನಗರ ಸಾಮ್ರಾಜ್ಯದಲ್ಲಿ ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಶ್ರೀ ಲಕ್ಷ್ಮಿ ಮತ್ತು ಶ್ರೀ ಸರಸ್ವತಿ ಇಬ್ಬರೂ ಸಮ-ಸಮವಾಗಿ ನೆಲೆಸಿ ನಿಂತಿದ್ದರು. ಸಾಮ್ರಾಜ್ಯದ ವಿಸ್ತೀರ್ಣದ ಜೊತೆಯಲ್ಲಿ ಸಾಹಿತ್ಯ ಸಾಮ್ರಾಜ್ಯವನ್ನು ಬೆಳೆಸಿದನು. ರಾಯನು ಸ್ವತಃ ಸಂಸ್ಕೃತ, ಕನ್ನಡ ತೆಲಗು ಭಾಷೆಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದಿದ್ದನು. ಆತನು ಸ್ವತಃ ಕವಿಯಾಗಿದ್ದನು. ಅನೇಕ ಕಾವ್ಯಗಳನ್ನು ಬರೆದಿದ್ದಾನೆ. ತೆಲಗು, ತಮಿಳು, ಕನ್ನಡ ಕವಿಗಳಿಗೆ ಆಶ್ರಯ ವನ್ನಿತ್ತಿದ್ದನು. ತೆನ್ನಾಲಿ ರಾಮಕೃಷ್ಣನು ವಿದೂಷಕ ಕವಿಯೆಂದು ಪ್ರಸಿದ್ಧ ನಾಗಿದ್ದನು. ಮುಖ್ಯರಾದವರೆಂದರೆ ಶ್ರೀನಾಥ, ಅಲಸಾನಿ ಪೆದ್ದಣ್ಣ ಹರಿಹರೇಶ, ತಿಮ್ಮಣ್ಣ ಅಪ್ಪಯ್ಯ ದೀಕ್ಷಿತ ಮುಂತಾದವರು ಆತನ ಆಸ್ಥಾನ ದಲ್ಲಿ ಎಂಟು ಜನರು ಹೆಸರಾದ ಕವಿಗಳು ಇದ್ದರು ಅವರಿಗೆ ಅಷ್ಟದಿಗ್ಗಜರು ಎಂದೆನ್ನುತ್ತಿದ್ದರು. ಇದಲ್ಲದೆ ಅರಸನಿಗೆ ಮೂರು ರಾಯರ ಗಂಡ ಎಂದೆನ್ನು ತ್ತಿದ್ದರು. ಗಜಪತಿ, ನರಪತಿ, ಅಶ್ವಪತಿ ಈ ಮೂವರು ರಾಜರನ್ನು ಆತನು ಗೆದ್ದಿದ್ದನು. ರಾಯನು ಸ್ವತಃ ತೆಲುಗು ಭಾಷೆ "ಆಮುಕ್ತಮಾಲ್ಯ" ವೆಂಬ ಕಾವ್ಯ ಗ್ರಂಥವನ್ನು ರಚಿಸಿದ್ದಾನೆ. ತೆಲುಗಿನಲ್ಲಿ ಈತನ ಕಾಲದಲ್ಲಿ ಉನ್ನತ ಶಿಖರಕ್ಕೇರಿದ್ದಿತು.

೧೩ ಸರ್ವಧರ್ಮ ಆಶ್ರಯದಾತ—ಶ್ರೀ ಕೃಷ್ಣದೇವರಾಯನು ಎಲ್ಲ ತರಹದ ಧರ್ಮಗಳಿಗೆ ಆಶ್ರಯವನ್ನಿತ್ತಿದ್ದನು. ಎಲ್ಲ ತರಹದ ಜಾತಿ-ಜನಾಂಗ ಗಳಲ್ಲಿ ಸೌಹಾರ್ದ, ಪ್ರೇಮ, ಇದ್ದವು. ವಿಜಯನಗರ ರಾಜರ ಮತ್ತು ಮುಸ್ಲಿಮ ರಾಜರ ನಡುವಣ ಯುದ್ಧವು ಧಾರ್ಮಿಕವಾದುದಲ್ಲ. ಅದು ರಾಜಕೀಯವಾದದ್ದು. ಇಸ್ಲಾಂ ಧರ್ಮಕ್ಕೆ ಮನ್ನಣೆಯನ್ನಿತ್ತಿದ್ದನು. ಅವರ

ಪವಿತ್ರವಾದ ಕುರಾನ ಗ್ರಂಥಕ್ಕೆ ರಾಯನು ಸ್ವತಃ ಸಿಂಹಾಸನದ ಮೇಲೆ ಇರಿಸಿ ನಮಸ್ಕರಿಸಿದನು. ಮುಸ್ಲಿಮ ಜನರನ್ನು ನಾನಾತರಪದ ಹುದ್ದೆಯಲ್ಲಿ ಇರಿಸಿ ಕೊಂಡಿದ್ದನು.

೧೪ ರಾಯನ ಸಾಧನೆಗಳು....ಶ್ರೀ ಕೃಷ್ಣದೇವರಾಯನ ಹಿಡಿತದಲ್ಲಿ ಮೂರುನೂರು ಬಂದರಗಳಿದ್ದವು. ಪೋರ್ತುಗೀಜ, ಇರಾಣ, ದೇಶಗಳ ಕೂಡ ವ್ಯಾಪಾರವನ್ನು ಇರಿಸಿಕೊಂಡಿದ್ದನು. ಜನರ ಹಿತರಕ್ಷಣೆಯ ಕಡೆಗೆ ವೈಯಕ್ತಿಕ ಕಾಳಜಿಯನ್ನು ತೆಗೆದುಕೊಳ್ಳುತ್ತಿದ್ದನು. ಅನೇಕ ಆಣೆಕಟ್ಟು ಗಳನ್ನು, ಗುಡಿಗಳನ್ನು, ಮಂದಿರಗಳನ್ನು, ಕಾರಂಜಿಗಳನ್ನು ಕಟ್ಟಿಸಿದನು. ಹಾಳುಬಿದ್ದ ಹಲವಾರು ಗುಡಿಗಳನ್ನು ತಿರುಗಿ ನವೀಕರಣ ಮಾಡಿಸಿದನು. ಬಿಷ್ಟಪ್ಪನ ಗೋಪುರವನ್ನು ತಿರುಗಿ ಕಟ್ಟಿಸಿದನು. ಅದು ಹನ್ನೊಂದು ಅಂತ ಸ್ತಿನದಿರುತ್ತದೆ. ಇಪ್ಪತ್ತೊಂದು ವರ್ಷಗಳ ಆತನ ಆಳಿಕೆಯಲ್ಲಿ ಶಾಂತವಾತಾ ವರಣ ರಾಜ್ಯದಲ್ಲಿದ್ದಿತು. ಬಹಳ ಪ್ರಮುಖವಾದ ಯುದ್ಧಗಳು ಈತನ ಕಾಲ ದಲ್ಲಿ ಆದವು. ಈತನ ತರುವಾಯ ವಿಜಯನಗರ ಅವನತಿ ಸ್ಥಿತಿಗೆ ಇಳಿ ಯಿತು. ಈತನ ತರುವಾಯ ಮಲತಮ್ಮನಾದ ಅಚ್ಯುತರಾಯನು ಬಂದನು.

## ೬ ವಿಜಯನಗರದ ವಿನಾಶ

ವೈಭವದ ಉತ್ತುಂಗ ಶೃಂಗವನ್ನೇರಿದ ವಿಜಯನಗರ ಹೇಗೆ ಹಾಳಾ ಯಿತು. ಇದು ಒಂದು ಪ್ರಶ್ನೆ. ಇದಕ್ಕೆ ಕಾರಣರು ರಾಜರೇ. ಶ್ರೀ ಕೃಷ್ಣದೇವ ರಾಯನ ನಂತರ ಬಂದ ಅರಸರೆಲ್ಲರೂ ಹೇಡಿಗಳೂ,ವಿಷಯಲಂಪಟರೂ, ಮುಸ ಲ್ಮಾನರಿಗೆ ಅಂಜಿ ನಡೆಯುವವರೂ ಆಗಿದ್ದರು. ಅದರಲ್ಲಿಯೂ ಅರವೀಡು ವಂಶದ ರಾಮರಾಯನಂತೂ ಅತ್ಯಂತ ಹೇಡಿಯು. ವಿಷಯ ಲಂಪಟತನವು ಮನೆಮಾಡಿತ್ತು. ಅನೇಕ ಮುಸಲ್ಮಾನ ಸ್ತ್ರೀಯರೊಡನೆ ಶರೀರ ಸಂಬಂಧ ಇರಿಸಿಕೊಂಡಿದ್ದನು ಆಯುಷಾಳಿಂದಪಡೆದ ಪುತ್ರನನ್ನು ಅಂಗರಕ್ಷಕನನ್ನಾಗಿರಿಸಿ ಕೊಂಡಾಗ ಬಿಜಾಪುರದ ಆದಿಲಶಹನು ಲಾಭವನ್ನು ಪಡೆಯುತ್ತಾನೆ. ಮುಂದೆ ೧೫೬೫ರಲ್ಲಿ ನಡೆದ ರಕ್ಕಸ-ತಂಗಡಗಿ ಅಥವಾ ತಾಳಿಕೋಟೆ ಯುದ್ಧದಲ್ಲಿ

ಮೋಸದಿಂದ ಮುಸಲ್ಮಾನರು ರಾಮ ರಾಯನ ಅಂಗರಕ್ಷಕ ಪುತ್ರನನ್ನು ಒಲಿಸಿ ಕೊಂಡು ಆತನಿಂದಲೇ ತಂದೆಯ ಶಿರಚ್ಛೇದನ ಮಾಡಿಸುತ್ತಾರೆ. ಮುಂದೆ ಮುಸಲ್ಮಾನರು ವಿಜಯನಗರದತ್ತ ಸಾಗಿ ಅವಿರತವಾಗಿ ಲೂಟಿಯನ್ನು ಮಾಡಿದರು. ಇತ್ತ ಅಯುಷೆಗೆ ಪತಿ ರಾಮರಾಯನ ಕೊಲೆ ಪುತ್ರನಿಂದಲೇ ಆಯಿತೆಂದು ತಿಳಿದು ಮಗನಿಗೆ ಛೀ ಹಾಕಿದಾಗ ಅವನಿಗೆ ನೈಜ ಸ್ಥಿತಿ ತಿಳಿದು ಮುಸಲ್ಮಾನರನ್ನು ಹೊಡೆದೋಡಿಸುತ್ತೇನೆಂದು ಪ್ರತಿಜ್ಞೆ ಮಾಡುತ್ತಾನೆ. ಆದರೆ ಅಷ್ಟರಲ್ಲಿ ಮುಸಲ್ಮಾನ ಸೈನಿಕರು ಎಲ್ಲವನ್ನೂ ದೋಚಿಕೊಂಡು ಹೋಗಿರುತ್ತಾರೆ ಹೀಗೆ ರಕ್ಕಸತಂಗಡಿಯ ಕಾಳಗದ ನಂತರ ವಿಜಯನಗರ ಸಾಮ್ರಾಜ್ಯ ಹಾಳಾಗಲು ಪ್ರಾರಂಭವಾಯಿತು. ರಾಜಧಾನಿಯು ಪೆನುಗೊಂಡೆಗೆ ಸ್ಥಳಾಂತರವಾಯಿತು. ಮತ್ತೆ ಮುಸಲ್ಮಾನರು ಪೆನುಗೊಂಡೆಗೆ ದಾಳಿ ಇಡಲು, ಚಂದ್ರಗಿರಿಗೆ ಸ್ಥಳಾಂತರಿಸಿದರು. ಹೀಗೆ ರಾಜಧಾನಿಯನ್ನು ಸ್ಥಳಾಂತರಿಸುತ್ತ ಅತಿ ಚಿಕ್ಕ ರಾಜ್ಯವಾಯಿತು. ಮುಂದೆ ಅದೂ ನಾಮಾವಶೇಷವಾಯಿತು.

ಒಂದಾನೊಂದು ಕಾಲದಲ್ಲಿ ಅತ್ಯಂತ ವೈಭವದ ಶಿಖರದಲ್ಲಿದ್ದ ಸಾವಿರಾರು ಯತಿಗಳಿಗೆ, ಸೈನಿಕರಿಗೆ, ರಾಜರಿಗೆ, ಸಾಹಿತಿಗಳಿಗೆ, ಕಲೆಗಳಿಗೆ ಆಶ್ರಯವಾಗಿದ್ದ ಭೂಸ್ವರ್ಗವಾಗಿದ್ದ ವಿಜಯನಗರ ಇಂದು ಪ್ರಾಣಿಗಳು, ಪಕ್ಷಿಗಳ ವಾಸಸ್ಥಾನವಾಗಿರುತ್ತದೆ. ಈಗ ಉಳಿದಿರುವದೇನು? ಭಗ್ನವಾದ ಮೂರ್ತಿಗಳು, ನಾಶವಾದ ಕಟ್ಟಡಗಳು ಹಾಳಾದ ಕೋಟೆ-ಕೊತ್ತಳಗಳು.... ಗತಜನ್ಮದ ಇತಿಹಾಸವನ್ನು ಎತ್ತಿ ನಮ್ಮೆದುರಿಗೆ ಹೇಳುವಂತೆ ಮೂಕವೇದನೆಯನ್ನು ಅನುಭವಿಸುತ್ತ ನಿಂತಿರುತ್ತವೆ.



## ಭಾಗ ೬

# ಹಾಳು ಹಂಪೆಯಿಂದ ವಿಜಯನಗರದ ಉಕ್ಕಿನ ಕಾರಖಾನೆಗೆ

ಹಿಂದೆ ಕನ್ನಡಿಗರು ಕಟ್ಟಿದ ಸಾಮ್ರಾಜ್ಯವು ಈಗ ಭಗ್ನವಾದ ಹಂಪೆಯು ಕರ್ನಾಟಕದ ಏಕೀಕರಣದ ನಂತರ ಸರಕಾರವು ಕೆಲವೊಂದು ಅನುಕೂಲತೆಗಳನ್ನು ಒದಗಿಸಿರುತ್ತವೆ. ಕಟ್ಟಡಗಳ ಪುನರ್ನಿರ್ಮಾಣ ಕಾರ್ಯವನ್ನು ಕೈಕೊಂಡಿದೆ. ಮುರಿದ ವಿಗ್ರಹಗಳನ್ನು ವಸ್ತುಸಂಗ್ರಹಾಲಯಕ್ಕೆ ಸೇರಿಸಿದೆ. ಅವಶೇಷಗಳ ನಡುವೆ ಒಳ್ಳೆಯ ಟಾರು ದಾರಿಯನ್ನು ನಿರ್ಮಿಸಿದೆ. ಮಾರ್ಗ ಸೂಚಕ ಹಲಗೆಗಳನ್ನು ಬರೆದಿರುತ್ತದೆ. ಶ್ರೀ ಪಂಪಾ ವಿರೂಪಾಕ್ಷನ ಗೋಪುರದಿಂದ ನೋಡಿದರೆ ತುಂಗಭದ್ರಾತೀರ, ಅರಮನೆಗಳ ಗುಂಪು ವಿಜಯ ವಿಠ್ಠಲಗುಡಿ ಕಂಗೊಳಿಸುತ್ತವೆ. ಕಂಪ್ಲಿ ದಾರಿಯಲ್ಲಿ ಹಜಾರರಾಮನ ಗುಡಿ ಸಿಗುತ್ತದೆ. ಉಗ್ರನರಸಿಂಹ, ಕಡಲೆಕಾಳು, ಸಾಸಿವೆಕಾಳು ಗಣೇಶನ ವಿಗ್ರಹಗಳನ್ನು ನಾವು ಕಾಣಬಹುದು. ವೈಶಾಖ ಮಾಸದಲ್ಲಿ ಹಂಪೆಯಲ್ಲಿ ಜಾತ್ರೆ ನಡೆಯುತ್ತದೆ. ಜಾತ್ರೆ ಬಹಳ ದೊಡ್ಡಪ್ರಮಾಣದಿಂದ ನಡೆಯುತ್ತದೆ ಸಾವಿರಾರು ಭಕ್ತ ಜನರು ಕೂಡುತ್ತಾರೆ. ಹಂಪೆಯ ಹಿಂದಿನ ಸೌಂದರ್ಯ ಇಂದಿಲ್ಲ. ಅದರ ಶಿಲೆಯ ಮಹತ್ವ ಉಳಿದಿಲ್ಲ. ವಿದೇಶಿ ಪ್ರವಾಸಿಗರು ಅಂದು ಬಣ್ಣಿಸಿದ ವಿರೂಪಾಕ್ಷ ಗುಡಿಯ ಮುಂದಿನ ನವರತ್ನಗಳ ಬೀದಿ ಈಗ ಭಿಕ್ಷುಕರ ತಾಣವಾಗಿರುತ್ತದೆ. ಪ್ರವಾಸ ಖಾತೆಯು ಸರಿಯಾದ ನೀರು ಊಟದ ವ್ಯವಸ್ಥೆಯನ್ನು ಮಾಡಬೇಕು. ತುಂಗಭದ್ರಾನದಿಗೆ ಪಾವಟಣಿಗೆಗಳನ್ನು ಕಟ್ಟಬೇಕು. ಆನೆಗೊಂದಿಗೆ ಒಂದು ಸೇತುವೆಯನ್ನು ನಿರ್ಮಿಸಬೇಕು. ಹಾಳು ಹಂಪೆಯ ಜೀರ್ಣೋದ್ಧಾರ-ಪುನರ್ ನಿರ್ಮಾಣ ಮಾಡಿದರೂ ಸರಿಯೇ.

ಈಗ ಸರಕಾರದವರು ಕೈಕೊಂಡ ವಿಜಯನಗರದ ನಾಮಾಂಕಿತ ಉಕ್ಕಿನ ಕಾರಖಾನೆಯ ಸ್ಥಾಪನೆ ಸ್ವಾಗತಾರ್ಹ. ಇದರಿಂದ ಹಾಳು ಹಂಪೆಯ

ಹೊಸ ಜೀವನದಲ್ಲಿ ಅಡಿ ಇರುತ್ತದೆ. ಅದಕ್ಕೆ ಸರಿಸಮವಾಗಿ ಹಂಪೆಯ ಐತಿಹಾಸಿಕ ಪರಂಪರೆಯನ್ನು ಉಳಿಸಿಕೊಂಡು ಬರುವದು. ಸರಕಾರದ ಕಾರ್ಯ ಹಳೆತು-ಹೊಸತುಗಳ ಸಂಗಮವಾಗಬೇಕು ಈ ಹಂಪೆ.

ಈಗ ತುಂಗಭದ್ರಾ ಆಣೆಕಟ್ಟಿನ ಕೈಲಾಸ ವೈಕುಂಠಗಳು ಕೇವಲ ಶ್ರೀಮಂತರ ಮನರಂಜನೆಯ ಸಾಧನಗಳಾಗಿವೆ. ಬಡವರು, ಮಧ್ಯಮವರ್ಗದ ಜನರು ಅವುಗಳ ಉಪಯೋಗ ತೆಗೆದುಕೊಳ್ಳುವಂತಾಗಲಿ. ಈಗ ಹೊಸದಾಗಿ ಅಂದರೆ ಎರಡು-ಮೂರು ವರ್ಷಗಳ ಹಿಂದೆ ಪುರಂದರದಾಸರ ಮಂಟಪವನ್ನು ಲಕ್ಷಾಂತರ ರೂ. ವೆಚ್ಚಮಾಡಿ ಕಟ್ಟಿಸಿದ್ದಾರೆ. ಪ್ರತಿವರ್ಷ ಅಲ್ಲಿ ಜಾತ್ರೆ ನಡೆಯುತ್ತದೆ. ಪೂಜೆ-ಪುನಸ್ಕಾರಗಳು ನಡೆಯುತ್ತವೆ. ಇಂಥ ಅನೇಕ ಮಂಟಪಗಳು ಉಂಟಾಗಲಿ, ಮತ್ತು ಹಳೆಯ ಮಂದಿರಗಳು, ಮಂಟಪಗಳು ತಮ್ಮ ಗತ ಅವಸ್ಥೆಯಿಂದ ನವೀಕರಣ ಹೊಂದಬೇಕು. ಅಂದರೆ ಐತಿಹಾಸಿಕ ಸ್ಥಳವಾದ ಹಂಪೆಯ ಮಹತ್ವ ಉಳಿದುಬಂದಂತೆ.



# ಭಾಗ ೭

## ಹಂಪಿಯಲ್ಲಿಯ ಪ್ರೇಕ್ಷಣೀಯ ಸ್ಥಳಗಳಿಗೆ ಮಾರ್ಗದರ್ಶನ

ಪ್ರವಾಸಿಕರಿಗೆ ಹಂಪಿಯಲ್ಲಿ ಆದರ ಸುತ್ತಲೂ ಪ್ರೇಕ್ಷಣೆಯ ಸ್ಥಳಗಳನ್ನು ನೋಡಲು ಅನುಕೂಲವಾಗಲೆಂದು ಇಲ್ಲಿ ಮಾರ್ಗದರ್ಶನವನ್ನು ಕೊಡಲಾಗಿದೆ. ಅವುಗಳ ವಿವರಣೆಯನ್ನು ಈ ಹಿಂದೆ ಕೊಡಲಾಗಿರುತ್ತದೆ.

ಹೊಸಪೇಟೆಯಿಂದ ಎಲ್ಲ ಕಡೆಗೂ ಬಸ್ಸಿನ ಅನುಕೂಲವಿರುತ್ತದೆ. ಹೊಸಪೇಟೆಯಿಂದ ಸೊಂಡೂರು, ನವಿಲುಬೆಟ್ಟ, ಆನೆಗುಂದಿ, ರಾಯರ ಕೆರೆ; ಹುಲಿಗೆಮ್ಮ ಹೊಸೂರಮ್ಮ ನೋಡಲಿಕ್ಕೆ ನೇರವಾದ ರಸ್ತೆಗಳಿವೆ. ಮತ್ತು ಬಸ್ಸುಗಳು ಇರುತ್ತವೆ. ಹೊಸಪೇಟೆಯಿಂದ ಪೂರ್ವಕ್ಕೆ ೧೧ ಕಿ. ಮೀ ಅಂತರದಲ್ಲಿ ಹಂಪೆಯು ಇರುತ್ತದೆ. ಹೊಸಪೇಟೆಯಿಂದ ಪೂರ್ವಕ್ಕೆ ಹಂಪಿಗೆ ಹೋಗುವ ಹರವಾರಿಯಿರುತ್ತದೆ. ಈ ಕಿರುದಾರಿಯಲ್ಲಿ ಹೊಸಪೇಟೆಯಿಂದ ಒಂದೂವರೆ ಕಿ. ಮೀ. ಕ್ರಮಿಸಿದರೆ ಅನಂತಶಯನ ಗುಡಿ ದೊರೆಯುತ್ತದೆ. ಅಲ್ಲಿಯೇ ಸುತ್ತಮುತ್ತಲಿನ ಪ್ರದೇಶಕ್ಕೆ ಅನಂತಶಯನನ ಹಳ್ಳಿ ಎಂದೆನ್ನುತ್ತಾರೆ. ಮುಂದೆ ಹೊಸಪೇಟೆ–ಕಂಪಲಿ ರಸ್ತೆಯ ಮೂರನೇ ಮೈಲುಗಲ್ಲಿನ ಬಳಿ ಮಲಪನಗುಡಿ ಇರುತ್ತದೆ. ಮುಂದೆ ಒಂದು ಮೈಲು ಸಾಗಿದರೆ ಕಡ್ಡಿ ರಾಮಪುರ ಬರುತ್ತದೆ. ಇಲ್ಲಿ ಮುಸಲ್ಮಾನರ ಗೋರಿಗಳಿರುತ್ತವೆ. ಮುಂದೆ ಬಲಕ್ಕೆ ತಿರುಗಿದರೆ ಕಾಮಲಾಪುರದ ಕೋಟೆ ಕಣ್ಣಿಗೆ ಕಾಣುತ್ತದೆ. ಎಡಕ್ಕೆ ತಿರುಗಿದರೆ ನೇರವಾಗಿ ಹಂಪೆಗೆ ಹೋಗುವ ದಾರಿ ದೊರಕುತ್ತದೆ. ಸಾಮಾನ್ಯವಾಗಿ ಬಸ್ಸುಗಳು ಬಲ ಮಾರ್ಗದಿಂದಲೇ ಕಾಮಲಾಪುರದ ಮೇಲಿಂದ ಹಂಪೆಗೆ ಬರುತ್ತವೆ. ಕಾಮಲಾಪುರದಿಂದ ಹಂಪೆಗೆ ಸಿಮೆಂಟ ರಸ್ತೆ ಇರುತ್ತದೆ.

ಪಂಪಾ ನಗರ— ಇಲ್ಲಿ ಪಂಪಾಪತಿ ಮುಖ್ಯ ದೇವರು ಇಲ್ಲಿ ಭಿಷ್ಟಪ್ಪ ಯ್ಯನ ಗೋಪುರವಿರುತ್ತದೆ. ವಿರೂಪಾಕ್ಷ ದೇವರ ದರ್ಶನವು ಮುಖ್ಯ ವಾದದ್ದು. ಕಾರ್ತಿಕ ಹುಣ್ಣಿಮೆಯ ದಿನ ಮನ್ಮಥದಹನೋತ್ಸವ ನಡೆಯು ತ್ತದೆ. ಇದಕ್ಕೆ "ಉರಿ" ಎಂತಲೂ ಕರೆಯುವರು. ಮಾರ್ಗಶಿರ ಬಹುಳ ಬಿದಿಗೆಯ ದಿನ ನಿಶ್ಚಿತಾರ್ಥೋತ್ಸವ ನಡೆಯುವದು. ಇದಕ್ಕೆ 'ಸಿರಿ' ಎಂದು ಕರೆಯುತ್ತಾರೆ. ಚೈತ್ರ ಶುದ್ಧ ರಾಮನವಮಿಯಿಂದ ಚೈತ್ರವದ್ಯ ಬಿದಿಗೆಯ ವರೆಗೆ ನಡೆಯುವ ಉತ್ಸವಕ್ಕೆ ಕಲ್ಯಾಣೋತ್ಸವ ಎನ್ನುತ್ತಾರೆ. ಇದಕ್ಕೆ 'ಸಂಪತ್ತು' ಎನ್ನುತ್ತಾರೆ. ಇದರ ಜೊತೆಗೆ ಚೈತ್ರ ಶುದ್ಧ ತ್ರಯೋದಶಿ ದಿನ ವಿರೂಪಾಕ್ಷನಿಗೆ ಕಲ್ಯಾಣೋತ್ಸವ ಮಾಡುತ್ತಾರೆ. ಚೈತ್ರ ವದ್ಯ ಬಿದಿಗೆ ತಿಥಿ ಯಂದು ಕೊಂದಡರಾಮನಿಗೆ ಕಲ್ಯಾಣೋತ್ಸವ ನಡೆಯುತ್ತದೆ. ಅಂದು ರಥ ವನ್ನು ಎಳೆಯುತ್ತಾರೆ.

ಭಿಷ್ಟಪ್ಪಯ್ಯನವರ ಗೋಪುರದ ಮುಂಭಾಗದಲ್ಲಿ ಒಂದು ಕಿಲೋ ಮೀಟರ ಉದ್ದವಾಗಿಯೂ ತೊಂಭತ್ತು ಮೀಟರ ಅಗಲವಾಗಿಯೂ ಕಾಣುವ ವಿಶಾಲ ಬೈಲು ಸ್ಥಳವೇ ಹಂಪೆಯ ಪೇಟೆಯ ಬೀದಿ. ಪಂಪಾಪತಿಯ ಮಂದಿರದ ಸಮ್ಮುಖದಲ್ಲಿರುವದೇ ಮಾತಂಗ ಪರ್ವತವು. ಆದರೆ ಪೇಟೆಯ ಬೀದಿಯ ಕೊನೆಯ ತುದಿಯಲ್ಲಿ ಒಂದು ಎರಡಂತಸ್ತಿನ ಮಂಟಪವಿರುತ್ತದೆ. ಎರಡನೇ ಮಂಟಪದಲ್ಲಿ ಒಂದು ಅಖಂಡ ಬಂಡೆಗಲ್ಲಿನಲ್ಲಿ ಕೆತ್ತಿದ ಬಸವನ ಮೂರ್ತಿ ಅದೆ. ಇದೇ ಎದುರು ಬಸವ. ಈ ಬಸವ ಮಂಟಪದ ಸ್ವಲ್ಪ ಹಿಂದೆ ಎಡಭಾಗದಲ್ಲಿ ನದಿಗೆ ಹೋಗಲಿಕ್ಕೆ ಒಂದು ಕಾಲುದಾರಿ ಇದೆ. ನದಿಯ ಆಚೆದಡದಲ್ಲಿ ಬಂಡೆಗಲ್ಲುಗಳಿವೆ. ಅವೇ ಋಷ್ಯ ಮೂಕ ಪರ್ವತ. ಅಲ್ಲಿಯೇ ಚಕ್ರತೀರ್ಥ ವಿರುತ್ತದೆ.

ಚಕ್ರತೀರ್ಥದ ದಂಡೆಯ ಮೇಲೆ ಅಳೆತ್ತರದಲ್ಲಿ ಕೋದಂಡರಾಮನ ಗುಡಿ ಇದೆ. ಈ ಗುಡಿಯ ಹಿಂದೆ ಸೂರ್ಯನಾರಾಯಣನ ಗುಡಿ ಇರುತ್ತದೆ. ಈ ಗುಡಿಯ ಹಿಂಬದಿಯಲ್ಲಿರುವ ಕಲ್ಲುಬಂಡೆಯ ಮೇಲೆ ಯಂತ್ರೋದ್ಧಾರಕ ಗುಡಿ ಇರುತದೆ

ಸೂಚನೆ ಸಂಪಾಪತಿಯ ಗುಡಿಯಿಂದ ಚಕ್ರತೀರ್ಥದ ವರೆಗೆ ವಾಹನ ಗಳು ಓಡಾಡುವವು. ಮುಂದೆ ಕಾಲುನಡಿಗೆಯಿಂದ ಬರಬೇಕು.

ಕೋದಂಡರಾಯನ ಗುಡಿಯಿಂದ ಸು. ೧೨೦ ಅಡಿ ಅಂತರದಲ್ಲಿ ವರಾಹನ ಗುಡಿ ಇದೆ. ಇದರ ಪಕ್ಕದಲ್ಲಿ ಅನಂತಶಯನ ಚಿಕ್ಕ ಗುಡಿ ಇದೆ ವರಾಹನ ಗುಡಿಯ ದಕ್ಷಿಣ ಭಾಗದಲ್ಲಿ ಸೂಳೆ ಬಜಾರ ಇರುತ್ತದೆ. ಇಲ್ಲಿಯೆ ಅಚ್ಯುತರಾಯನ ಮಂದಿರ ಇದೆ.

ಸೂಚನೆ....ಈ ಮಂದಿರದ ಹಿಂದಿನ ಕಾಲುದಾರಿ ಮಾತುಂಗ ಪರ್ವತಕ್ಕೆ ಹೋಗುತ್ತದೆ. ವರಾಹನ ಗುಡಿಯ ಉತ್ತರ ದಿಕ್ಕಿಗೆ ಸಾಗಿದರೆ ಸೀತಾ ಸರೋವರ ತಲುಪುತ್ತೇವೆ. ಇದು ದಿನ್ನೆಯ ಕೆಳಗೆ ಇರುತ್ತದೆ. ಇದಕೆ ಸೀತಾ ಸೆರಗು ಎಂದೂ ಅನ್ನುತ್ತಾರೆ. ಸೀತಾ ಸರೋವರಕ್ಕೆ ಹೋಗುವ ಮಾರ ಮಧ್ಯ ಮಾಸತಿ ಕಲ್ಲುಗಳಿವೆ. ಮಾಸತಿ ಕಲ್ಲಿನ ಹಿಂಬದಿಗೆ ಅನತಿ ದೂರದಲ್ಲಿ ಏಕಸ್ತಂಭಸ್ತಂನ ಕಟ್ಟಡವಿದೆ. ಇದು ವ್ಯಾಸರಾಯರಾಯರ ಮಠವು ಸೀತಾ ಸರೋವರದ ದಕ್ಷಿಣಕ್ಕೆ ತಿರುಗಿದರೆ ಸುಗ್ರೀವನ ಗುಹೆ ಇದೆ. ಸುಗ್ರೀವನ ಗವಿಯ ಹಿಂಭಾಗದಲ್ಲಿ ನದಿಯ ಮಧ್ಯಭಾಗದಲ್ಲಿ ಕಲ್ಲಿನ ಕಂಭಗಳು ಕಾಣುತ್ತವೆ ಅಲ್ಲಿಂದ ಉತ್ತರಕ್ಕೆ ಹೋದರೆ ಕಲ್ಲಗಸಿ ಕೋಟೆಯ ಅವಶೇಷಗಳು ಕಾಣುತ್ತವೆ. ಅಲ್ಲಿಂದ ಉತ್ತರಕ್ಕೆ ಬಂದರೆ ತುಲಾಭಾರ ಚೌಕಟ್ಟು ಇರುತ್ತದೆ. ಇದರ ಎಡಗಡೆಗೆ ರಸ್ತೆ ಇರುತ್ತದೆ. ಇದು ನದಿ ದಂಡೆಗೆ ಹೋಗುತ್ತದೆ. ಅಲ್ಲಿ ಕಲ್ಲಿನ ಮಂಟಪ ಕಾಣುತ್ತದೆ. ಇದಕ್ಕೆ ಪುರಂದರದಾಸರ ಮಂಟಪ ಎನ್ನುತ್ತಾರೆ. ಇಲ್ಲಿಯೇ ಮುಂದೆ ಕಲ್ಲಿನ ತೇರು ಮತ್ತು ವಿಜಯ ವಿಠ್ಠಲನ ಗುಡಿ ಇರುತ್ತದೆ ವಿಠ್ಠಲನ ಮಂದಿರದ ಉತ್ತರ ದಿಕ್ಕಿನಲ್ಲಿ ದಾರಿ ಇದೆ. ಈ ದಾರಿ ನದೀ ದಡದಲ್ಲಿರುವ ಮಂಟಪಗಳ ಮುಂದೆ ಹೋಗುತ್ತದೆ. ನದಿ ಮಧ್ಯದಲ್ಲಿ ದಿನ್ನೆ ಅದೆ. ಅಲ್ಲಿ ನರಹರೀ ತೀರ್ಥದ ವೃಂದಾವನವಿದೆ.

ಮೇಲೆ ಹೇಳಿದ ಸ್ಥಳಗಳನ್ನು ವಾಹನಗಳ ಸಹಾಯದಿಂದ ನೋಡುವರು ಕಮಲಾಪುರ–ಕಂಪ್ಲಿ ರಸ್ತೆಯಿಂದ ಬಸ್ಸಿನ ಮೂಲಕ ಗಾಣಗಿತ್ತಿ ದೇವಾಲಯ ಮುಖಾಂತರ ಮಾಲ್ಯವಂತ ಒನ್ನೆಗೆ ಬಂದು ಅಲ್ಲಿ ಕವಲುದಾರಿಯ ಎಡಪಕ್ಕಕ್ಕೆ ತಿರುಗಿಕೊಂಡು ಸು. ೨ ಕಿ. ಮೀ. ದಾರಿಯನ್ನು ತುರ್ತ ಕಾಲುವೆ ದಾಟಿ

ಕೊಂಡು ಮುಂದೆ ಬಂದರೆ ನದೀ ದಂಡೆಗೆ ಬರುತ್ತೇವೆ. ಹರಿಗೋಲಿನಿಂದ ನದಿ ದಾಟಬಹುದು. ಇದಕ್ಕೆ ತಳವಾರ ಪೇಟೆ ಎನ್ನುತ್ತಾರೆ ನದಿ ದಾಟಿದರೆ ಆನೆ ಗೊಂದಿ ಮಾರ್ಗ. ಆದರೆ ಈ ಜೆಯ ದಡದಲ್ಲಿಯೇ ಎಡಕ್ಕೆ ತಿರುಗಿದರೆ ವಿಠ್ಠಲನ ಗುಡಿಯ ದಾರಿ:

### ಹೇಮಕೂಟ

ಹಂಪೆಯ ಗುಡಿಯ ದಕ್ಷಿಣಕ್ಕೆ ಹೇಮ ಕೂಟ ಪರ್ವತವು ಇದೆ. ಇಲ್ಲಿ ಅನಂತ ಗುಡಿಗಳು ಸಾಲ್ಲಾಗಿ ಕಂಗೊಳಿಸುತ್ತವೆ. ಪರ್ವತದ ತುದಿಯಲ್ಲಿ ಒಂದು ಚೌಕೋನಾಕೃತಿಯ ದೇವಾಲಯವಿದೆ. ಅಲ್ಲಿ ಕಡಲೆಕಾಳು ಸಾಸಿವೆಕಾಳು ಗಣೇಶ ಬಾಲಕೃಷ್ಣನ ಗುಡಿ ಇರುತ್ತವೆ. ಇದರ ಉತ್ತರಕ್ಕೆ ವಿಷ್ಣುಪಾದವಿದೆ ಬಾಲಕೃಷ್ಣನ ಗುಡಿಯಿಂದ ಕೆಳಗಿಳಿದರೆ ಉಗ್ರನರಸಿಂಹನ ಗುಡಿ ಇರುತ್ತದೆ. ಉಗ್ರನರಸಿಂಹನ ವಿಗ್ರಹದ ಮಗ್ಗುಲಿಗೆ ಬಡವಿಲಿಂಗ ಇದೆ. ಅಲ್ಲಿಯೇ ಉದ್ದಾನ ವೀರಭದ್ರ ಹನ್ನೆರಡು ಅಡಿ ಎತ್ತರವಿರುವ ವಿಗ್ರಹವಿದೆ. ಹೇಮ ಕೂಟದ ಪೂರ್ವದಿಕ್ಕಿನಲ್ಲಿ ರತ್ನಕೂಟ ಅಥವಾ ರಜತಾದ್ರಿ ಇರುತ್ತದೆ. ಇನ್ನು ಕೆಳಗೆ ಇಳಿದರೆ ಅಕ್ಕತಂಗಿಯರ ಅವಳಿ ದಿನ್ನೆ ಇದರ ಎದುರಿಗಿನ ಸೀಳು ದಾರಿಯ ಹತ್ತಿರದಲ್ಲಿ ನೆಲಪಾತಳಿಯ ಕೆಳಗಿರುವ ಗುಡಿ ಪಾತಾಳೇಶ್ವರನ ಗುಡಿ. ಇದರ ಪಕ್ಕದಲ್ಲಿ ಹೋಗುವ ರಸ್ತೆಗೆ ಹಂಪೆ–ಕಾಮಲಾಪುರ ರಸ್ತೆ ಎನ್ನುತ್ತಾರೆ. ಇಲ್ಲಿಂದ ಪೂರ್ವಾಭಿಮುಖ ಮಾಡಿ ಮುಂದೆ ಹೋದರೆ ಡಣಾಯಕನ ಕೋಟೆ ಅಥವಾ ಕಾವಲು ಗೋಪುರ ಇರುತ್ತದೆ.

ಈ ಗೋಪುರದ ಮಗ್ಗುಲಿನ ವಿಶಾಲವಾದ ಬೈಲಿನಲ್ಲಿ ಸೇನಾಪತಿಯ ಅರಮನೆಯ ಅವಶೇಷಗಳಿವೆ. ಈ ಅರಮನೆಯ ಪಕ್ಕದಲ್ಲಿ ಟಂಕಶಾಲೆ ಇದೆ ಇಲ್ಲಿಯೇ ಹಜಾರಿ ರಾಮನ ಗುಡಿ ಇರುತ್ತದೆ. ಮುಂದೆ ಹಜಾರ ರಾಮನ ಗುಡಿಯ ಉತ್ತರಕ್ಕೆ ಮತ್ತು ಪೂರ್ವಕ್ಕೂ ವಿಶಾಲವಾದ ಬೈಲು ಪ್ರದೇಶವಿದೆ. ಆ ಪ್ರದೇಶದ ಮಧ್ಯದಿಂದ ಹರದಾರಿ ಹೋಗುತ್ತದೆ. ಈ ದಾರಿಯಿಂದ ಹೋದರೆ ಎತ್ತರ ಗೋಡೆಯ ಕೋಟೆ ಕಾಣುತ್ತದೆ. ಅಲ್ಲಿ ರಾಣಿ ನಿವಾಸ ಇದೆ ಇದರ ಮುಂದೆ ಕುಮಾರ ರಾಮನ ಗುಡಿ ಈ ಗುಡಿಯಿಂದ ಮುಂದೆ ಸಾಗಿದರೆ ರಾಣಿಯರ ಸ್ನಾನಗೃಹ (ಮೇಲೆ ಹೇಳಿದ ಬೈಲು ಮೈದಾನ ದಲ್ಲಿ ಒಂದು ವಸ್ತುಸಂಗ್ರಹಾಲಯ ಕಟ್ಟಡ, ಕ್ಯಾಂಟೀನ ಕಟ್ಟಡ ಇರುತ್ತವೆ )

ಸ್ನಾನಗೃಹದಿಂದಾಚೆಗೆ ಕಮಲ ಮಹಲ್ ಇರುತ್ತದೆ. ಇಲ್ಲಿಯೇ ರಂಗಸ್ವಾಮಿ ಗುಡಿ ಇರುತ್ತದೆ. ಇದರ ಹಿಂದೆ ಹಾಳಾದ ಜೈನ ಗುಡಿ ಇದೆ. ಇವೆರಡರ ಮಧ್ಯೆ ಬೇವಿನ ಗಿಡದ ಬೈಲಿನಲ್ಲಿ ಪಟ್ಟದ ಎಲ್ಲಮ್ಮನ ಗುಡಿ ಇರುತ್ತದೆ. ಇಲ್ಲಿಯೇ ಗಜಶಾಲೆ ಇರುತ್ತದೆ. ಇಲ್ಲಿ ವಸ್ತುಸಂಗ್ರಹಾಲಯವಿದೆ. ಇಲ್ಲಿ ಶ್ರೀ ಕೃಷ್ಣದೇವರಾಯನ ಮತ್ತು ಆತನ ದ್ವಿ-ಪತ್ನಿಯರ ವಿಗ್ರಹಗಳಿವೆ.

ಹಜಾರರಾಮನ ಗುಡಿಯ ನೈಋತ್ಯ ದಿಕ್ಕಿಗೆ (ದಕ್ಷಿಣ-ಪಶ್ಚಿಮ) ಒಂದು ದೊಡ್ಡ ಬಯಲಂಗಳವಿದೆ. ಅಂಗಳದಲ್ಲಿ ಎತ್ತರವಾದ ಕಟ್ಟೆಯ ಮೇಲೆ ಪೀಠ ಇರುತ್ತದೆ. ಅದೇ ಸಭಾಮಂಟಪ ಸಭಾಮಂಟಪದ ಹಿಂದೆ ಸು. ೫೦ ಗಜ ಅಂತರದ ಮೇಲೆ ದಕ್ಷಿಣಕ್ಕೆ ಅರಮನೆಯ ನೆಲಮಾಳಿಗೆ ಇರುತ್ತದೆ. ಇದರ ಹಿಂದೆ ಸಾರ್ವಜನಿಕ ಸ್ನಾನಗೃಹ ಇರುತ್ತದೆ. ಅರಮನೆಯ ಪಟಾಂಗಣದ ಬಳಿ ೨೭ ಅಡಿ ಎತ್ತರದ ವಿಶಾಲವಾದ ದಿನ್ನೆ. ಇದು ದಸರಾ ದಿಬ್ಬ ಅಥವಾ ಮಹಾನವಮಿ ದಿಬ್ಬ. ದಸರಾದಿಬ್ಬದ ಮುಂಬದಿಯ ಕೆಳಗೆ ಭಾರೀ ಕಲ್ಲಿನ ಬಾಗಿಲು ಅದೆ. ಅದರ ಕೆತ್ತನೆಯ ಕಾರ್ಯ ಸೂಕ್ಷ್ಮವಾದದ್ದು. ಕಲ್ಲಿನ ಬಾಗಿಲ ಹಿಂದೆ ಕಾಮಲಾಪುರದ ರಾಜಬೀದಿಯ ಪಕ್ಕದಲ್ಲಿ ಓಕಳಿ ಕುಂಡವಿದೆ. ಇದೂ ರಾಣಿಯರ ಸ್ನಾನಗೃಹ ಓಕಳಿ ಕುಂಡದ ಪಕ್ಕಕ್ಕೆ ಚಂದ್ರಶೇಖರ ಗುಡಿ ಇದೆ. ಇದೊಂದು ಶಿವಲಿಂಗ. ಸರಸ್ವತಿ ಗುಡಿ ಚಂದ್ರಶೇಖರನ ಗುಡಿಯ ಮುಂಭಾಗದಲ್ಲಿದೆ. ಚಂದ್ರಶೇಖರನ ಗುಡಿಯ ಹಿಂಬದಿಯ ಬೆಟ್ಟದಲ್ಲಿ ಬಂಡೆಯನ್ನು ಕೊರೆದು ಗುಹೆಯನ್ನು ನಿರ್ಮಿಸಿದ್ದಾರೆ ಅದುವೇ ಗುಹಾಲಯ.

ಇಲ್ಲಿಯವರೆಗೆ ಪಂಪಾನಗರದ ಅವಶೇಷಗಳನ್ನು ನೋಡಿದ್ದಾಯಿತು. ಇನ್ನು ಮುಂದೆ ಪಂಪಾನಗರದ ಹೊರಗೆ ಅಂದರೆ ಕಾಮಲಾಪುರದ ಆಗ್ನೆಯ ದಿಕ್ಕಿನಲ್ಲಿರುವ ಸ್ಮಾರಕಗಳನ್ನು ನೋಡಬೇಕು.

ಹಂಪೆಯ ಹೊರಭಾಗ ಹಂಪೆಯ ಪಾವರ ಹೌಸಿಗೂ ಕಾಮಲಾಪುರಕ್ಕೆ ಸು. ಒಂದು ಮೈಲು ಅಂತರವಿದೆ. ಈ ಮಾರ್ಗ ಮಧ್ಯದಲ್ಲಿ ಪಟ್ಟಾಭಿರಾಮ ಗುಡಿ ಇರುತ್ತದೆ. ಪಟ್ಟಾಭಿರಾಮನ ಗುಡಿಯಿಂದ ಸು. ಎರಡು ಮೈಲುಗಳಂತರದಲ್ಲಿ ಹಂಪೆಯ ಪಾವರ ಹೌಸ ಇರುತ್ತದೆ. [ಹಂಪೆ, ಮುನಿರಾಬಾದ,

ಹೊಸಪೇಟೆ ಅಣೆಕಟ್ಟಿಗೆ ಬಸ್ಸಿನ ಸೌಕರ್ಯವಿದೆ] ಕಾಮಲಾಪುರದ ಮತ್ತು ಮತ್ತು ಕಂಪ್ಲಿ ರಸ್ತೆಯಲ್ಲಿ ಸು. ಒಂದೂವರೆ ಮೈಲಿನಂತರದಲ್ಲಿ ಕಾಮಲಾಪುರ ದಿಂದ ಪೂರ್ವ ದಿಕ್ಕಿಗೆ ಗಾಣಗಿತ್ತಿಯ ಗುಡಿ ಇರುತ್ತದೆ. ಇದರ ಹಿಂದೆ ಸ್ವ ಗಜಾಂ ಅಡಿ ದೂರದಲ್ಲಿ ಭೀಮನ ಅಗಸಿ ಬಾಗಿಲು, ಅದರ ಹಿಂದೆ ಸ್ವಲ ದೂರದಲ್ಲಿ ಹನುಮನ ಬಾಗಿಲು ಇವೆ. ಮಾಲ್ಯವಂತನ ಗುಡ್ಡವು (ಕಿಷ್ಕಿಂದೆ ಗಾಣಗಿತ್ತಿಯ ಗುಡಿಯಿಂದ ಸು. ಒಂದೂವರೆ ಮೈಲು ಅಂತರದಲ್ಲಿ ಕಂಪ್ಲಿ-ಕಾಮಲಾಪುರ ರಸ್ತೆಯಲ್ಲಿದೆ. ಈ ಬೆಟ್ಟದ ಮೇಲೆ ರಘುನಾಥ ಮಂದಿರವಿದೆ.

ಇದೇ ಬೆಟ್ಟದ ಪಶ್ಚಿಮ ಭಾಗದಿಂದ ಅಂಕುಡೊಂಕಾದ ರಸ್ತೆಯಿಂದ ಆನೆಗೊಂದಿಗೆ ಹೋಗಲಿಕ್ಕೆ ಬರುತ್ತದೆ. ಇಲ್ಲಿಂದ ಆನೆಗುಂದಿ ಎರಡು ಮೈಲಾಗ ಬಹುದು. ಆದರೆ ಇದಕ್ಕಿಂತ ಸರಳವಾಗಿ ಆನೆಗುಂದಿಗೆ ಹೊಸಪೇಟೆಯಿಂದ ಬಸ್ಸಿನಿಂದ ಹೋಗಬಹುದು. ತಳವಾರ ಘಟ್ಟದಿಂದ ಹೋದರೆ ನದಿ ದಾಟ ಬೇಕಾಗುತ್ತದೆ

ಆನೆಗುಂದಿ

ಹೊಸಪೇಟೆಯಿಂದ ಆನೆಗುಂದಿ ೨೫ಮೈಲು. ಹೊಸಪೇಟೆಯಿಂದ ತುಂಗ ಭದ್ರಾ ಡ್ಯಾಮಸೈಟ್, ಮುನಿರಾಬಾದ ಅಗಳಕೆರೆ, ಸಾಣಾಪುರ, ಆನೆಗುಂದಿ ಹೀಗೆ ಮಾರ್ಗವಿರುತ್ತದೆ. ಇನ್ನೊಂದು ಮಾರ್ಗ ಹೊಸಪೇಟೆ-ಕಾಮಲಾಪುರ ಕಂಪ್ಲಿ-ಗಂಗಾವತಿ, ಆನೆಗುಂದಿ ಇದು ಸು. ೨೨ ಮೈಲು ಉದ್ದದ ಮಾರ್ಗ. ಎಲ್ಲಕ್ಕೂ ಹತ್ತಿರದ ಮಾರ್ಗ ಹೊಸಪೇಟೆ-ಕಾಮಲಾಪುರ-ತಳವಾರಘಟ್ಟ ಇಲ್ಲವೆ ಬಸ್ಸಿಗೆ ಬರಬೇಕು. ಅಲ್ಲಿಂದ ದೋಣಿಯಲ್ಲಿ ನದೀ ತೀರವನ್ನು ದಾಟಿ ಆನೆಗುಂದಿಗೆ ಹೋಗಬೇಕು. ಈ ಅಂತರ ಕೇವಲ ೧೦ ಮೈಲು. ತಳವಾರ ಘಾಟ ಅಂದರೆ ಹಂಪೆಯಿಂದ ಆನೆಗುಂದಿಗೆ ಹೋಗುವ ಮಾರ್ಗ ಮಧ್ಯೆ ಇರುವ ಜಲಮಾರ್ಗ.

ತಳವಾರ ಘಾಟಿನಲ್ಲಿ ದೋಣಿಯಿಂದ ನದಿ ತಟಾಕದ ಬಳಿ ಬಲು ದುರ್ಗಮವಾದ ದಾರಿಯಿಂದ ನಿಂಬಾಪುರದ ಹದ್ದಿನಲ್ಲಿರುವ ವಾಲಿಕಾಷ್ಠಕ್ಕೆ ಬರ ಬೇಕು. ಆದರ ಈಚೆಗೆ ಕಪಿಲಾಶ್ರಮ ತಳವಾರ ಘಾಟ ದಾಟಿದ ಬಳಿಕ ಊರೊಳಗೆ ಹೋಗಬೇಕಾದ ಒಂದು ಕಿ. ಮೀ. ಮಾರ್ಗದಲ್ಲಿರುವ ಒಂದು ಹೊಲದ ಮಧ್ಯ ಹುಚ್ಚಪ್ಪಯ್ಯನ ಮಠ ಇರುತ್ತದೆ.

ಆನೆಗ ಂದಿಯ ಆಗ್ನೆಯ ಮೂಲೆಯಲ್ಲಿ ಚಿಂತಾಮಣಿ ಮೂಲಮಠ ಇದೆ. ತ್ರಿಪುರಸುಂದರಿ ಮಂದಿರ ಈ ಮಠದ ಹೊರಭಾಗದಲ್ಲಿದೆ ರಾಮ ಬಾಣ ಎಂಬ ಗುಡಿಕಲ್ಲು ಇಲ್ಲಿಯೇ ಆದೆ. ಮುಂದೆ ತುಂಗಭದ್ರಾ ನದಿಯ ಪಾತ್ರದ ಮಧ್ಯದಲ್ಲಿ ನಡುಗಡ್ಡೆಯಲ್ಲಿ ನವವೃಂದಾವನವಿದೆ ಇಲ್ಲಿಯೇ ಸನೀಹದಲ್ಲಿ ಎಡಕ್ಕೆ ಕಾಲಕೂಟಾದ್ರಿ ಇದೆ.

ಆನೆಗುಂದಿಯಿಂದ ಸು. ಒಂದೂಕಾಲು ಮೈಲಿನ ಮೇಲೆ ಪಂಪಾ ಸರೋವರ ಇರುತ್ತದೆ. ಸರೋವರದ ದಂಡೆಯಲ್ಲಿ ಜಯಲಕ್ಷ್ಮಿಗುಡಿ, ಈಶ್ವರ ಲಿಂಗನ ಗುಡಿ, ಹನುಮಂತನ ಗುಡಿ, ಗಣೇಶನ ಗುಡಿ ಮುಂತಾದ ಗುಡಿಗಳಿರು ತ್ತವೆ

ಪಂಪಾಸರೋವರ ಮಾರ್ಗ ಮಧ್ಯದಲ್ಲಿ ಪಂಪನಾಥನ ಗುಡಿ ಇದೆ.

ನವವೃಂದಾವನದ ಉತ್ತರ ದಿಕ್ಕಿನಲ್ಲಿ ತಾರಾಪರ್ವತ ಇದೆ.

ಪಂಪಾಸರೋವರದ ದಕ್ಷಿಣ ದಿಕ್ಕಿನಲ್ಲಿ ಅಂಜನಾದ್ರಿ ಇದೆ. ಅಂಜನಾ ದ್ರಿಯ ಪೂರ್ವದಿಕ್ಕಿನ ತಳದಲ್ಲಿ ಮಧುವನವಿದೆ.

ಪಂಪಾಸರೋವರದ ಮುಂದೆ ೫ ಯಾರ್ಡಗಳಷ್ಟುದೂರ ಹೋದಮೇಲೆ ಎಡಕ್ಕೆ ಮಾನಸರೋವರವಿದೆ. ಇದರ ಪಶ್ಚಿಮಕ್ಕೆ ಪಾರ್ವತಿಯ ಗುಹೆ ಇದೆ. ಪಂಪಾಸರೋವರ ಮಾರ್ಗದಲ್ಲಿ ಅರ್ಧಮೈಲು ಮುಂದೆ ಹೋದರೆ ಎಡಕ್ಕೆ ಬಂಡೆಕಲ್ಲಿನ ಗುಡ್ಡವಿದೆ. ಇದರ ಮಧ್ಯದಲ್ಲಿ ರಂಗನಾಥ ಗುಡಿ ಇದೆ. ರಂಗನಾಥನ ಗುಡ್ಡದ ಮೇಲೆ ಮೇಕೋಟ ಕೋಟೆ ನಿಂತಿದೆ.

ಆನೆಗುಂದಿಯ ಪೂರ್ವದಿಕ್ಕಿಗೆ ಒಂದು ಕಲ್ಲಿನ ಕೋಟೆಯ ಬಾಗಿಲಿದೆ. ಈ ಬಾಗಿಲಿನಿಂದ ಒಂದು ದಾದಿ ನದಿಪಾತ್ರಕ್ಕೆ ಹೋಗುತ್ತದೆ. ತುಂಗಭದ್ರೆಯ ಮಧ್ಯದಲ್ಲಿ ೬೪ ಕಂಭಗಳ ಒಂದು ಹಳೆಯ ಮಂಟಪವಿದೆ. ಇದು ಕೃಷ್ಣದೇವ ರಾಯರ ಸಮಾಧಿಯಾಗಿರುತ್ತದೆ.

ಕಂಪ್ಲಿ ರೋಡಿನಲ್ಲಿರುವ ೯ನೇ ಮೈಲುಗಲ್ಲು ದಾಟಿದ ಬಳಿಕ ಎರಡನೇ ಫರ್ಲಾಂಗಿನ ಬಲಭಾಗದಲ್ಲಿ ಒಂದು ಕಾಲು ದಾರಿ ಗುಡ್ಡಕ್ಕೆ ಹೋಗುತ್ತದೆ. ಈ ಗುಡ್ಡದಮೇಲೆ ತಿಮ್ಮಪ್ಪನಗುಡಿ ಇದೆ.

ಪ್ರವಾಸಿಗರು ಈ ಎಲ್ಲ ಸ್ಥಳಗಳನ್ನು ಅವಶ್ಯವಾಗಿ ನೋಡಲೇಬೇಕು ಇವುಗಳ ವಿವರಣೆಯನ್ನು ಈ ಹಿಂದೆ [ಭಾಗ—೨ರಲ್ಲಿ] ಕೊಡಲಾಗಿರುತ್ತದೆ.

ವಿವರದಲ್ಲಿ ಹೆಚ್ಚಿನ ವಿಷಯ ವಿವರವಿದೆ. ಸಂದರ್ಭಕ್ಕೆ ತಕ್ಕ ಚಿತ್ರಗಳನ್ನು ಈ ಪುಸ್ತಕದಲ್ಲಿ ನೋಡಬಹುದು.

## ಹೊಸಪೇಟೆಯಲ್ಲಿ ಈ ಕೆಳಗಿನ ಛತ್ರಗಳಿವೆ

೧ ಬಂಡ್ರಿ ರಾಘಪ್ಪನವರ ಧರ್ಮಶಾಲೆ—ಇದು ಸ್ಟೇಶನ್ನ ರಸ್ತೆಯಲ್ಲಿರುತ್ತದೆ. ಹನ್ನೆರಡು ಕೊಠಡಿಗಳಿರುತ್ತವೆ. ಮದುವೆಯ ಮಂಟಪವಿದೆ.

೨ ಕಟ್ಟಾನಪ್ಪ ಧರ್ಮಶಾಲೆ—ಇದು ಗಾಂಧೀ ಚೌಕದಲ್ಲಿದೆ. ಸ್ಟೇಶನ್ನಿಗೆ ೨ ಫರ್ಲಾಂಗದಲ್ಲಿದೆ. ೨೧ ಕೊಠಡಿಗಳಿರುತ್ತವೆ. ಊಟದ ವ್ಯವಸ್ಥೆ ಇಲ್ಲ.

೩ ಪತ್ರಿಕೊಂಡ ಧರ್ಮಛತ್ರ—ಇದು ಕಾವಲಾಪುರ ರಸ್ತೆಯಲ್ಲಿರುತ್ತದೆ. ಸ್ಟೇಶನ್ನಿನಿಂದ ಒಂದೂವರೆ ಮೈಲು ಅಂತರ. ಸಾದಾ ಛತ್ರವಿರುತ್ತದೆ

೪ ಶಿವರಾಮ ಧರ್ಮಾಶ್ರಮ—ಇದು ಕಾಮಲಾಪುರದ ರಸ್ತೆಯಲ್ಲಿರುತ್ತದೆ. ಸ್ಟೇಶನ್ನಿಗೆ ೭ ಫರ್ಲಾಂಗ ಅಂತರ

೫ ಮುನಸಿಪಲ್ ಪ್ರವಾಸಿಮಂದಿರ....ಇದು ಸ್ಟೇಶನ್ ರಸ್ತೆಯಲ್ಲಿರುತ್ತದೆ ಸ್ಟೇಶನ್ನಿಗೆ ಮುಕ್ಕಾಲು ಮೈಲು ದೂರದಲ್ಲಿರುತ್ತದೆ. ಬಸ್ ಸ್ಟ್ಯಾಂಡಿಗೆ ಅರ್ಧ ಮೈಲು ಅಂತರದಲ್ಲಿದೆ. ಒಟ್ಟಿಗೆ ೧೦ ಕೊಠಡಿಗಳು. ಕೇವಲ ವಸತಿಗೆ ವ್ಯವಸ್ಥೆ.

## ಹಂಪಿಯಲ್ಲಿ

ಪಂಪಾಪತಿ ದೇವಸ್ಥಾನದ ಪೌಳಿ—ದೇವಸ್ಥಾನದ ಪಟಾಂಗಣದಲ್ಲಿ ಕೊಠಡಿಗಳಿರುತ್ತವೆ. ಅವುಗಳು ಬಾಡಿಗೆಯಿಂದ ದೊರೆಯುತ್ತವೆ. ಅಡಿಗೆ ಮಾಡಿಕೊಳ್ಳಲು ಪಾತ್ರೆಗಳು ದೊರಕುತ್ತವೆ.

೨ ಗಂಗಾವತಿ ವೆಂಕೋಬಣ್ಣ ಶ್ರೇಷ್ಠಿ ಧರ್ಮಛತ್ರ— ಹಂಪೆಯ ಬಝಾರದಲ್ಲಿದೆ. ಛತ್ರದಲ್ಲಿ ನೀರಿನಭಾವಿ ಅದೆ. ಕೊಠಡಿಗಳಲ್ಲಿ ಅಡಿಗೆ ಮಾಡಲು ಎಲ್ಲ ಬಗೆಯ ಅನುಕೂಲತೆಗಳಿರುತ್ತವೆ.

೩ ಪತ್ರಿಕೊಂಡ ಛತ್ರ— ಪಂಪಾಪತಿ ಗುಡಿಯ ಮಗ್ಗಲುಗೆ ಅದೆ. ಎರಡಂತಸ್ತಿನ ಛತ್ರವಿದು. ಅನುಕೂಲತೆ ಕಡಿಮೆ.

ಹಂಪಿಯಲ್ಲಿ ಇಳಿದುಕೊಳ್ಳಲು. ಊಟಕ್ಕೆ ಸರಿಯಾದ ವ್ಯವಸ್ಥೆಯನ್ನು ಮಾಡಿರುತ್ತಾರೆ.

# ಪರಿಶಿಷ್ಟ

## ವಾಯುಮಾರ್ಗ-ರೈಲುಮಾರ್ಗ

ಹಂಪೆ, ಮತ್ತು ಸುತ್ತಲಿನ ಪ್ರದೇಶ ಹೊಸಪೇಟೆ, ಆನೆಗೊಂದಿ, ಮುನಿರಾಬಾದ ಮತ್ತು ಸೊಂಡೂರ ನೋಡಲಿಕ್ಕೆ ಬರುವ ಪ್ರವಾಸಿಗರಿಗೆ ಅನುಕೂಲತೆಗಳಿಗಾಗಿ ರೈಲು-ಬಸ್ಸು ಬೇಕಾದಷ್ಟು ಅವೆ. ಅವುಗಳ ಸ್ಥೂಲ ವಿವರಣೆ ಇಲ್ಲಿದೆ

ವಾಯುಮಾರ್ಗ—೧) ಹೊಸಪೇಟೆಯು ಬಳ್ಳಾರಿ ಜಿಲ್ಹೆಯಲ್ಲಿದೆ. ಬೆಂಗಳೂರಲ್ಲಿ ವಿಮಾನ ನಿಲ್ದಾಣವಿದೆ. ಬೆಂಗಳೂರ-ಹೊಸಪೇಟೆ ಅಂತರ ಸು. ೧೬೦ ಮೈ. ಈಗ ಸರಕಾರದವರು ಹೊಸಪೇಟೆಯಲ್ಲಿಯೂ ವಿಮಾನ ನಿಲ್ದಾಣವನ್ನು ಕಟ್ಟುವ ಯೋಜನೆಯನ್ನು ಹಾಕಿಕೊಂಡಿದ್ದಾರೆ.

೨) ಬೆಳಗಾವಿಯು ಅತಿ ಸಮೀಪದ ವಿಮಾನ ನಿಲ್ದಾಣ. ಬೆಳಗಾವಿ ಹೊಸಪೇಟೆಗಳ ಅಂತರ ಸುಮಾರು ೧೧೫ ಮೈಲು.

೩) ಬೀದರವು ಅತಿ ದೂರದ ವಿಮಾನ ನಿಲ್ದಾಣ- ಬೀದರ-ಹೊಸಪೇಟೆಗಳ ಅಂತರ ಸು. ೨೨೫ ಮೈಲು.

೪] ಹೈದ್ರಾಬಾದ ದೂರದ ವಿಮಾನ ನಿಲ್ದಾಣ. ಹೈದ್ರಾಬಾದ-ಹೊಸಪೇಟೆ ಅಂತರ ಸು. ೨೫೦ ಮೈಲು.

ಮೇಲೆ ಹೇಳಿದ ವಿಮಾನ ನಿಲ್ದಾಣಗಳಿಂದ ಪ್ರವಾಸಿಗರು ಬಂದು ಅಲ್ಲಿಂದ ರಸ್ತೆದಾರಿಯಿಂದ ಕಾರು, ಟ್ಯಾಕ್ಸಿ, ಬಸ್ಸ್, ಮೈಸೂರ ರಾಜ್ಯಸಾರಿಗೆ ಬಸುಗಳಿಂದ ಬರಬಹುದು.

ರೈಲು ಮಾರ್ಗ— ಹೊಸಪೇಟೆಯು ದಕ್ಷಿಣ ರೇಲ್ವೆ ವಲಯದ ಗುಂತಕಲ್ಲ—ಹುಬ್ಬಳ್ಳಿ ವಿಭಾಗದಲ್ಲಿರುವ ರೈಲು ನಿಲ್ದಾಣವು.

ಹೊಸಪೇಟೆಯು ವಾಟರಿಂಗ್ ನಿಲ್ದಾಣವಿರುವದರಿಂದ ರೈಲುಗಳು ೧೦—೧೫ ಮಿನಿಟು ನಿಲ್ಲುತ್ತವೆ.

ಹೊಸಪೇಟೆಯಿಂದ ಪ್ರತ್ಯೇಕವಾಗಿ ಕೊಟ್ಟೂರು ಕಡೆಗೂ ಮತ್ತೊಂದು ಸ್ವಾಮಿಹಳ್ಳಿ ಕಡೆಗೂ ರೈಲು ಹೋಗುತ್ತದೆ.

ಈ ರೈಲುಗಳು ಹೊಸಪೇಟೆಯಲ್ಲಿ ನಿಲ್ಲುತ್ತವೆ.

ಹುಬ್ಬಳ್ಳಿ—ಗುಂತಕಲ್ಲ

ಹುಬ್ಬಳ್ಳಿ—ಗುಂಟೂರು

ಹುಬ್ಬಳ್ಳಿ....ಮೈಸೂರ

ಗದಗ —ಗುಂತಕಲ್

ಹೊಸಪೇಟೆಯಿಂದ—ಗುಂತಕಲ್—೧೧೩ ಕಿ. ಮಿ.

,, ಗದಗ – ೮೫ ಕಿ. ಮಿ. ಅಂತರ

,, ಹುಬ್ಬಳ್ಳಿ —೧೪೪ ,, ,,

,, ಕೊಟ್ಟೂರು —೭೦ ,, ,,

,, ಸಾಮೆಹಳ್ಳಿ ....೬೦ ,, ಅಂತರವಿರುತ್ತವೆ.



# ಸಂಗಮವಂಶ

ಒಂದನೇ ಹರಿಹರ—ಕಂಪಣ

ಒಂದನೇ ಬುಕ್ಕರಾಯ ಮಾರಪ್ಪ ಮುದ್ದಪ್ಪ

ಎರಡನೇ ಹರಿಹರ— ಕಂಪರಾಯ ಚಿಕ್ಕ ಕಂಪರಾಯ

ಮಲ್ಲಿನಾಥ, ಸಂಗಮ, } ಮಂತ್ರಿಗಳು

ಎರಡನೇ ಬುಕ್ಕರಾಯ ಚಿಕ್ಕರಾಯ ವಿರೂಪಾಕ್ಷರಾಯ

ಒಂದನೇ ದೇವರಾಯ—ಸದಾಶಿವರಾಯ—ಚಿಕ್ಕದೇವರಾಯ

ವೀರವಿಜಯರಾಯ ಹರಿಹರ III ಮಲ್ಲಣ್ಣ

ಪ್ರೌಢ ದೇವರಾಯ ಪರ್ವತಿದೇವರಾಯ ಹರಿಯಾಲದೇವಿ

ಮಲ್ಲಿಕಾರ್ಜುನರಾಯ ವಿರೂಪಾಕ್ಷರಾಯ

ರಾಜಶೇಖರರಾಯ ಎರಡನೇ ಪ್ರೌಢ ದೇವರಾಯ

# ಸಾಳ್ವ ವಂಶ

ಗುಂಡರಾಜು ಸಾಳ್ವ



# ತುಳುವಂಶ


ತಿಮ್ಮರಾಜು
ಈಶ್ವರರಾಜು
ನರಸರಾಜು
ತಿಮ್ಮರಾಜು
ತಿಪ್ಪಾಂಬಿಕೆ
ನಾಗಲಾಂಬಿಕೆ
ಅಂಬಿಕಾ
ವೀರನರಸಿಂಹರಾಯ
[೧೫೦೩-೯]
ಕೃಷ್ಣದೇವರಾಯ
(೧೫೦೯-೩೦)
ತಿರುಮಲ ದೇವರಾಯ
ಅಚ್ಯುತರಾಯ
[೧೫೩೦-೪೨)
ರಂಗರಾಯ
ವೆಂಕಟದೇವರಾಯ
ಸದಾಶಿವರಾಯ
(ರಾಮರಾಯನ ಅಳಿಯ]
(೧೫೪೩-೭೮)
ತಿರುಮಲಾಂಬಿಕೆ
ವೆಂಗದಂಬಿಕೆ
ತಿರುಮಲದೇವರಾಯ

# ಅರವೀಡು ವಂಶ

ಸೋಮದೇವ

ರಘುದೇವ

ಪಿನ್ನಸೂರ್ಕ

ಬುಕ್ಕರಾಯ (ಸಾಳ್ವ ನರಸಿಂಹನ ಸೇನಾಧಿಪತಿ)

ರಾಮರಾಯ (ಸಹೋದರ)

ತಿಮ್ಮರಾಯ — ಕೊಂಡರಾಯ — ಶ್ರೀರಂಗರಾಯ

ಕೊಂಡರಾಯ — ತಿಮ್ಮರಾಯ — ಅಳಿಯ ರಾಮರಾಯ (೧೫೪೧-೬೫)

ತಿರುಮಲ ದೇವರಾಯ (೧೫೬೯-೭೨) — ವೆಂಕಟಾದ್ರಿ — ಲೋಕಾಂಬಾ

ರಘುನಾಥ ರಾಯ — ಶ್ರೀರಂಗ ರಾಯ (೧೫೭೨-೮೫) — ರಾಮರಾಯ — ವೆಂಕಟಪತಿ (೧೫೮೫-೧೬೧೪)

ತಿರುಮಲರಾಜು — ರಾಮರಾಯ

(ಚಿಕ್ಕರಾಯ ೧೬೧೪)

ರಾಮದೇವರಾಯ

ಪೆದ್ದವೆಂಕಟಪತಿರಾಯ

(೧೬೪೨-೭೮) ಆರನೆಯ ರಂಗರಾಯ

(೧೬೭೮-೯೦) ವೆಂಕಟಪತಿರಾಯ

ಪ್ರೇಕ್ಷಣೀಯ ಸ್ಥಳಗಳನ್ನು ಪ್ರವಾಸಿಗರ ತಿಳುವಳಿಕೆಗೆ ಐದು ಭಾಗಗಳನ್ನಾಗಿ ಮಾಡಲಾಗಿರುತ್ತದೆ.

೧ ಪಂಪಾಪತಿ ಪ್ರದೇಶ
೨ ಆನೆಗುಂದಿ ಪ್ರದೇಶ
೩ ವಿಠ್ಠಲರಾಯ ಪ್ರದೇಶ
೪ ಕಮಲಾಪುರ ಪ್ರದೇಶ
೫ ಕೋಟೆಯ ಪ್ರದೇಶ

## ೧ ಹೊಸಪೇಟೆ ಪ್ರದೇಶ

೧ ತುಂಗಭದ್ರಾ ಯೋಜನೆ
೨ ಸಕ್ಕರೆ ಕಾರಖಾನೆ
೩ ರಾಯರ ಕೆರಿ
೪ ಜಂಬುನಾಥ ಮಂದಿರ
೫ ಅನಂತಶಯನ ಗುಡಿ

## ಪಂಪಾಪತಿ ಪ್ರದೇಶ

೧ ಕಡ್ಡಿರಾಮಪುರ ಹಳ್ಳಿಯಲ್ಲಿಯ ಮುಸಲ್ಮಾನರ ಗೋರಿಗಳು
೨ ಕೃಷ್ಣಸ್ವಾಮಿ ಗುಡಿ
೩ ಚಿಕ್ಕವಿಷ್ಣು ಮಂದಿರ
೪ ಗಣೇಶ ಮೂರ್ತಿಗಳು (ಸಾಸಿವೆ ಕಾಳು—ಕಡಲೆಕಾಳು)
೫ ಜೈನ ಮಂದಿರಗಳು
೬ ಪಂಪಾಪತಿ ದೇವಾಲಯ—ಶಬರಿ ಆಶ್ರಮ
೭ ಭುವನೇಶ್ವರಿ ಗುಡಿ
೮ ಲೋಕಪಾವನ ಕೆರೆ
೯ ಮನ್ಮಥ ಗುಂಡ
೧೦ ಹಂಪಿ ಬಝಾರ
೧೧ ಮಾತಂಗ ಬೆಟ್ಟ

೧೨ ಕೋದಂಡರಾಮ ಗುಡಿ
೧೩ ಯಂತ್ರೋದ್ಧಾರಕ ಗುಡಿ
೧೪ ಚಕ್ರತೀರ್ಥ
೧೫ ಬಡವಿಲಿಂಗ
೧೬ ಉಗ್ರನರಸಿಂಹ
೧೭ ಮಾಸತಿ ಕಲ್ಲುಗಳು
೧೮ ಉದ್ದಾನ ವೀರಭದ್ರ
೧೯ ಅಕ್ಕತಂಗಿಯರ ಬಂಡೆಗಳು
೨೦ ಚಂಡಿಕೇಶ್ವರ ಮಂಡಿರ
೨೧ ತುರ್ತ ಆಣೆಕಟ್ಟು

## ೨ ಆನೆಗುಂದಿ ಪ್ರದೇಶ

೧ ಮೇಕೋಟಾ
೨ ಅಂಜನಾದ್ರಿ
೩ ಮಧುವನಮ್
೪ ಪಂಪಾಸರೋವರ
೫ ಮಾನ ಸರೋವರ
೬ ಕೃಷ್ಣದೇವರಾಯನ ಸಮಾಧಿ
೭ ನವ ವೃಂದಾವನಗಳು
೮ ತಾರಾ ಪರ್ವತಮ್
೯ ಹುಚ್ಚಪ್ಪಯ್ಯನ ಮಠ
೧೦ ಚಿಂತಾಮಣಿ ಆಶ್ರಮ
೧೧ ಗಣೇಶ ಮೂರ್ತಿ
೧೨ ರಂಗನಾಥಸ್ವಾಮಿ ಮಂದಿರ
೧೩ ಗಗನ ಮಹಲ
೧೪ ಗವಿ ರಂಗನಾಥನಾಯಕ

## ೩ ವಿಠ್ಠಲರಾಯನ ಪ್ರದೇಶ

೧ ವರಾಹ ಮಂದಿರ
೨ ಸೂಳೆ ಬಝಾರ
೩ ಅಚ್ಚುತರಾಯ ಮಂದಿರ
೪ ಜೈನ ಮಂದಿರ
೫ ಸುಗ್ರೀವನ ಗುಹೆ
೬ ಸೀತೆ ಸೆರಗು
೭ ಸೀತಾ ಸರೋವರ
೮ ರಾಮ–ಲಕ್ಷ್ಮಣರ ಪಾದಗಳು
೯ ವಿಠ್ಠಲ ರಾಯಮಂದಿರ
೧೦ ವಾಲಿಕಾಷ್ಠ
೧೧ ವ್ಯಾಸರಾಯ ಮಂಟಪ
೧೨ ತಳವಾರ ಘಟ್ಟ
೧೩ ತುಲಾಭಾರ ಮಂಟಪ

## ೪ ಕಮಲಾಪುರ ಪ್ರದೇಶ

೧ ಕೃಷ್ಣದೇವರಾಯನ ಮೂರ್ತಿ
೨ ಕಮಲಾಪುರ ಪ್ರವಾಸಿ ಮಂದಿರ
೩ ಹನುಮಂತನ ಬಾಗಿಲು
೪ ಪಟ್ಟಾಭಿರಾಮನ ಗುಡಿ
೫ ಶಿಲ್ಪ ಕೆತ್ತನೆಗಳು

## ೫ ಕೋಟೆಕೊತ್ತಳದ ಪ್ರದೇಶ

೧ ಡಣಾಯಕನ ವಾಸಸ್ಥಳ
೨ ಹಝಾರ ರಾಮನ ಗುಡಿ
೩ ರಾಣಿ ಮಹಲು
೪ ಪ್ರವಾಸಿ–ವಿಶ್ರಾಂತಿ ಮಂದಿರ
೫ ಕಾವಲು-ಗೋಪುರ

೬ ಕಮಲ ಮಹಲು
೭ ಗಜಶಾಲೆ
೮ ರಕ್ಷಣಾದಳದ ಶಾಲೆ
೯ ರಂಗಮಂದಿರ
೧೦ ದಪ್ತರಖಾನಾ
೧೧ ಪಟ್ಟಣದ ಯಲ್ಲಮ್ಮನ ಗುಡಿ
೧೨ ಕಲ್ಲಿನ ಬಾಗಿಲು (ಭಗ್ನವಾಗಿರುತ್ತದೆ)
೧೩ ಅಖಂಡ ಕಲ್ಲಿನ ಮಂಟಪ
೧೪ ಕಲ್ಲಿನ ತೇರು
೧೫ ದಸರಾ ದಿಬ್ಬ
೧೬ ಟಂಕಶಾಲೆ
೧೭ ಸಾರ್ವಜನಿಕ ಸ್ನಾನಗೃಹ
೧೮ ರಾಣಿ ಸ್ನಾನ ಮಂದಿರ
೧೯ ಚಂದ್ರಶೇಖರ ಮಂದಿರ
೨೦ ಸರಸ್ವತೀ ಮಂದಿರ
೨೧ ಭೀಮನ ಬಾಗಿಲು
೨೨ ಹನುಮಂತನ ಬಾಗಿಲು
೨೩ ತಿಮ್ಮಪ್ಪನ ಮಂದಿರ
೨೪ ಆನಂದ ಅಥವಾ ಶಂಭುನಾಥಗುಹೆ
೨೫ ಮಾಲ್ಯವಂತ ರಘುನಾಥ ಮಂದಿರ
೨೬ ಗಾಣಗಿತ್ತಿ ಗುಡಿ
೨೭ ವೀರಭದ್ರಸ್ವಾಮಿ ಗುಡಿ
೨೮ ದಶಾವತಾರ ಕೆತ್ತನೆಗಳು
೨೯ ವಿಷ್ಣುಪಾದವು
೩೦ ದರ್ಗಾ ಮತ್ತು ಮುಸಲ್ಮಾನ ಸಾಧುಗಳ ಗೋರಿಗಳು
೩೧ ಮಹಮ್ಮದೀಯರ ಗುಮ್ಮಟ



ಹಂಪಿ ಕ್ಷೇತ್ರದ ಪೊಟೋಗಳು ಹಾಗೂ
ಪುಸ್ತಕಗಳು ಸಿಗುತ್ತವೆ.

**ವಿಭೂತಿ ಬಸಯ್ಯನವರು**
**ಹಂಪಿ**

ಬೆಲೆ  

2.00